॥ ಶ್ರೀ ಲಕ್ಷ್ಮೀನರಸಿಂಹೋ ವಿಜಯತೇ ॥

## ಶ್ರೀಸತ್ಯಪರಾಕ್ರಮತೀರ್ಥವಿರಚಿತಂ

# ಶ್ರೀ ಸತ್ಯವ್ರತತೀರ್ಥಸ್ತೋತ್ರಮ್

ಸಂಪಾದನೆ : ಪಂ.ವಾದಿರಾಜಾಚಾರ್ಯ ಕರಣಂ

ಪ್ರಕಾಶನ :
ಶ್ರೀಮಜ್ಜಗದ್ಗುರು ಶ್ರೀಮನ್ ಮಧ್ವಾಚಾರ್ಯ ಮೂಲಮಹಾಸಂಸ್ಥಾನ,
2019
ಶ್ರೀ ಉತ್ತರಾದಿಮಠ

ವಿ.ಮ.ಮ.ಪ ಗ್ರಂಥಮಾಲಾ 188

# ಅನುಗ್ರಹಸಂದೇಶ

ಈ ಮಹಾನುಭಾವರಿಗೆ ಸತ್ಯವ್ರತ ಎಂಬ ಹೆಸರು ಸಾರ್ಥಕವಾಗಿದೆ. ಪರಮಾತ್ಮ ಸತ್ಯನಾಮಕನಾಗಿದ್ದಾನೆ. ಆ ಪರಮಾತ್ಮನು ಮಾಡುವ ವ್ರತ ಎಂದರೇ ಕರ್ಮಗಳು ಸೃಷ್ಟ್ಯಾದಿಕರ್ಮಗಳು ಸತ್ಯವಾಗಿವೆ. ಅಂಥ ಪರಮಾತ್ಮನ ಮಹಿಮೆಯನ್ನು ತಿಳಿಸಿಕೊಡುವ ತೀರ್ಥಗಳ ಶಾಸ್ತ್ರಗಳ ಅಧ್ಯಯನ ಮಾಡಿರುವುದರಿಂದ, ಅಂಥ ತೀರ್ಥಗಳನ್ನು ಶಾಸ್ತ್ರಗಳನ್ನು ರಚಿಸಿರುವುದರಿಂದಲೂ ಇವರು ಸತ್ಯವ್ರತನಾಮಕರಾಗಿದ್ದಾರೆ.ಅವರಿಗೆ ಮಾಡುವ ಪ್ರದಕ್ಷಿಣೆ ನಮಸ್ಕಾರಗಳು ಸತ್ಯವಾಗುತ್ತವೆ. ನಮ್ಮ ಸೌಭಾಗ್ಯದ ಜೀವನಕ್ಕೆ ಸಾಧನವಾಗುತ್ತವೆ.

ಸತ್ಯಪರಾಕ್ರಮತೀರ್ಥರು ರಚಿಸಿದ ಈ ಸ್ತೋತ್ರವು ಪರಮ ರಮಣೀಯವಾಗಿದೆ. ಈ ಸ್ತೋತ್ರಕ್ಕೆ ಕನ್ನಡ ಅನುವಾದವನ್ನು ಮಾಡಿದ ನಮ್ಮ ಪ್ರಿಯಶಿಷ್ಯನಾದ ಪಂ. ವಾದಿರಾಜಾಚಾರ್ಯ ಕರಣಂ ಇವನಿಗೆ ಇತೋಽಪ್ಯತಿಶಯವಾದ ಅನುಗ್ರಹವನ್ನು ಮಾಡಲೆಂದು ಅಸ್ಮದುಪಾಸ್ಯಮೂರ್ತಿಗಳಾದ ಶ್ರೀಮನ್ಮೂಲಸೀತಾಸಮೇತ ಶ್ರೀಮನ್ಮೂಲರಾಮ ದಿಗ್ವಿಜಯರಾಮ ವೇದವ್ಯಾಸರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

Rarest Archiver

# ಶ್ರೀಸತ್ಯವ್ರತತೀರ್ಥರು

## ವೈಭವದ ಪೂರ್ವಾಶ್ರಮ

ಶ್ರೀಸತ್ಯವ್ರತತೀರ್ಥರು ಪೂರ್ವಾಶ್ರಮದಲ್ಲಿ ರಂಗನಾಥಾಚಾರ್ಯರೆಂದು ಪ್ರಸಿದ್ಧರಾಗಿದ್ದರು. ಇವರು ಶ್ರೀವಿದ್ಯಾಧೀಶತೀರ್ಥರ ಶಿಷ್ಯರು.

ಚತುಶ್ಶಾಸ್ತ್ರಗಳಲ್ಲಿಯ ಇವರ ಪರಿಣತಿ ಎಲ್ಲರಿಗೂ ಆಶ್ಚರ್ಯಕರವಾಗಿತ್ತು. ಇವರ ಜಪದ ಸಿದ್ಧಿ ಅತ್ಯಂತ ಅದ್ಭುತವಾಗಿತ್ತು. ಜಪಕ್ಕೆ ಕುಳಿತುಕೊಂಡರೇ ಏನೇ ಗದ್ದಲವಾದರೂ ಇವರ ಮನಸ್ಸು ಕಿಂಚಿತ್ತೂ ವಿಚಲಿತವಾಗುತ್ತಿರಲಿಲ್ಲ. ಅಷ್ಟು ಸಂಯಮವನ್ನು ಸಾಧಿಸಿದ ಸಂಯಮಿಗಳು.

ಅದೊಂದು ದಿನ. ಎಂದಿನಂತೆ ಜಪದಲ್ಲಿ ಆಸಕ್ತರಾಗಿದ್ದಾರೆ. ಶಾಸ್ತ್ರ ಹೇಳಿದಂತೆ ಮುಸುಕು ಹಾಕಿಕೊಂಡು ಜಪಿಸುತ್ತಿದ್ದಾರೆ. ಸಮಯ ಬಹಳ-ವಾಯಿತು. ಜೊತೆಗೆ ಇದ್ದವರೆಲ್ಲರ ನಿತ್ಯ-ನೈಮಿತ್ತಿಕ ಕರ್ಮಗಳೆಲ್ಲವೂ

Rarest Archiver

ಮುಕ್ತಾಯವಾದವು. ಇವರ ಜಪ ಮಾತ್ರ ಮುಕ್ತಾಯದ ಹಂತಕ್ಕೆ ತಲುಪಿರಲಿಲ್ಲ. ಇಷ್ಟು ಹೊತ್ತು ಇವರೇನು ಮಾಡುತ್ತಿದ್ದಾರೆ? ಮುಸುಕಿನಲ್ಲಿಯೇ ನಿದ್ರೆ ಮಾಡುತ್ತಿದ್ದಾರಾ? ಜೊತೆಗೆ ಇದ್ದವರು ಆಲೋಚಿಸಿದರು. ಇವರ ಪಾಂಡಿತ್ಯದ ಅರಿವಿದ್ದವರು ಸುಮ್ಮನೇ ಕುಳಿತರು. ಆದರೇ ಹಲವರು ಕುಚೇಷ್ಟೆ ಮಾಡುವುದಕ್ಕಾಗಿ ಇವರ ಮುಸುಕನ್ನು ಸರಿಸಿದರು. ಅಲ್ಲಿ ಶ್ವೇತವರಾಹ ಕಾಣಿಸಿಕೊಂಡಿತು. ಎಲ್ಲರನ್ನೂ ಆದು ಭಯ ಪಡಿಸಿತು. ಕೂಡಲೇ ಮತ್ತೆ ಮುಸುಕನ್ನು ಸರಿಪಡಿಸಿದರು. ನಂತರ ಅವರ ತಂಟೆಗೆ ಹೋಗಲೇ ಇಲ್ಲ.

ಆ ಸಮಯದಲ್ಲಿ ಅವರು ವರಾಹ ಮಂತ್ರದ ಜಪವನ್ನು ಮಾಡುತ್ತಿದ್ದರು. ಯಾವಾಗ ಯಾವ ಮಂತ್ರದ ಜಪವನ್ನು ಅವರು ಮಾಡುವರೋ ಆವಾಗ ಆ ರೂಪದ ದರ್ಶನ ಅವರಿಗೆ ಆಗುತ್ತಿತ್ತು. ಇಂಥ ಭೂಮಾಪುರುಷರು ಶ್ರೀರಂಗನಾಥಾಚಾರ್ಯರು. ಅಂತೆಯೇ ಇವರಿಗೆ ಶ್ರೀಮದಾಚಾರ್ಯರ ವೇದಾಂತಸಾಮ್ರಾಜ್ಯವು ಒಲಿಯಿತು.

Rarest Archiver

**ಅಭೂತಪೂರ್ವವಾದ ನ್ಯಾಯಾಮೃತ ಅನುವಾದ**

ಶ್ರೀಗಳವರು ಯಾತ್ರಾಕ್ರಮೇಣ ಶೂರ್ಪಾಲಯಕ್ಕೆ ಬಂದರು. ಲಕ್ಷ್ಮೀನರಸಿಂಹ ದೇವರ ದರ್ಶನ ಮಾಡಿಕೊಂಡರು. ಆರಾಧನೆಯನ್ನು ಮಾಡಿದರು. ವ್ಯಾಸರಾಜರು ರಚಿಸಿದ ಶ್ರೀಮನ್ನ್ಯಾಯಾಮೃತ ಗ್ರಂಥದ ಅನುವಾದವನ್ನು ಅಭೂತಪೂರ್ವವಾಗಿ ಮಾಡಿದರು. ಆ ಅನುವಾದವನ್ನು ಕೇಳಿದ ಎಲ್ಲ ವಿದ್ವಾಂಸರೂ ಆಶ್ಚರ್ಯಸಾಗರದಲ್ಲಿ ಮುಳುಗಿದರು. ಸತ್ಯವ್ರತರ ಪಾಂಡಿತ್ಯಕ್ಕೆ ಶಿರಸಾಷ್ಟಾಂಗಪ್ರಣಾಮಗಳನ್ನು ಸಮರ್ಪಿಸಿದರು. ಹೀಗೆ ಅತ್ಯಂತ ಅಪರೂಪವಾದ ಪಾಂಡಿತ್ಯದಿಂದ ಸುಪ್ರಕಾಶಿತರಾದರು ಶ್ರೀಸತ್ಯವ್ರತತೀರ್ಥರು.

**ಸಜ್ಜನರ ಉದ್ಧಾರ**

ತನ್ನ ರಾಜ್ಯದಲ್ಲಿಯ ಜನರೆಲ್ಲರೂ ಏಕಾದಶಿಯನ್ನು ಕಡ್ಡಾಯವಾಗಿ ಮಾಡಬೇಕೆಂದು ರುಕ್ಮಾಂಗದ ಘೋಷಣೆ ಮಾಡಿಸಿದ. ಹಾಗೆಯೇ ಎಲ್ಲರಿಂದಲೂ ಏಕಾದಶೀ ಉಪವಾಸ ಮಾಡಿಸಿದ. ಈ ಘಟನೆಯನ್ನು ಪುರಾಣಗಳಲ್ಲಿ ಕೇಳುತ್ತೇವೆ. ಯಾರಾದರೂ ಏಕಾದಶಿಯನ್ನು ಮಾಡುತ್ತಿದ್ದರೇ

Rarest Archiver

ಅದು ರುಕ್ಮಾಂಗದನ ಆದೇಶದ ಪ್ರಭಾವ ಎಂಬುದಾಗಿ ಪುರಾಣಗಳು ಕೊಂಡಾಡುತ್ತವೆ. ಕಲಿಯುಗದಲ್ಲಿ ಇಂಥ ಕಾರ್ಯವನ್ನು ಮಾಡಿದ ಮಹಾನುಭಾವರು ಶ್ರೀಸತ್ಯವ್ರತತೀರ್ಥರು.

ಸಕಲ ಸಜ್ಜನರನ್ನು ಉದ್ಧಾರ ಮಾಡಲು ಅವತರಿಸಿದ ಭೂಮಾಪುರುಷರು ಶ್ರೀಸತ್ಯವ್ರತತೀರ್ಥರು. ಎಲ್ಲರಿಂದಲೂ ಸತ್ಕರ್ಮಗಳನ್ನು ಮಾಡಿಸಿದರು. ಎಲ್ಲರೂ ವೈಭವದಿಂದ ದೇವರ ಪೂಜೆಯನ್ನು ಮಾಡಬೇಕೆಂದು ಆದೇಶ ಮಾಡಿದರು. ಶ್ರೀಹರಿಯ ಪೂಜೆಯನ್ನು ವೈಭವಯುತವಾಗಿ, ಅನುಸಂಧಾನ ಪೂರ್ವಕವಾಗಿ ಹೇಗೆ ಮಾಡಬೇಕೆಂದು ಎಲ್ಲರಿಗೂ ಉಪದೇಶ ಮಾಡಿದರು. ಅವರ ಉಪದೇಶವನ್ನು ಪಡೆದ ಸಕಲ ಸದ್ಗೃಹಸ್ಥರೂ ದೇವರ ಪೂಜೆಯಲ್ಲಿ ವಿಶೇಷವಾಗಿ ನಿಮಗ್ನರಾದರು. ಈ ರೀತಿಯಾದ ವಿಶಿಷ್ಟವಾದ ಕ್ರಾಂತಿಯನ್ನು ಮಾಡಿದ ವಿಕ್ರಾಂತಪುರುಷರು ಶ್ರೀಸತ್ಯವ್ರತತೀರ್ಥರು. ಪರಿಶುದ್ಧವಾದ, ವೈಭವದ ಪೂಜೆಯು ಎಲ್ಲಿಯಾದರೂ ಕಂಡು ಬಂದರೇ ಅದು ಸತ್ಯವ್ರತತೀರ್ಥರ ಉಪದೇಶದ ಪ್ರಭಾವ ಎಂದು ಆಗಿನ ಕಾಲದಲ್ಲಿ ಪ್ರಸಿದ್ಧವಾಯಿತು.

Rarest Archiver

**ಅಪರೂಪದ ಪ್ರಾಮಾಣಿಕತೆ :**

ಸತ್ಯವ್ರತತೀರ್ಥರು ಗುರುಗಳಾದ ಶ್ರೀವಿದ್ಯಾಧೀಶತೀರ್ಥರ ಜೊತೆ ಯಾತ್ರೆಗೆ ಹೊರಟರು. ವಿದ್ಯಾಧೀಶರಿಗೆ ಇವರ ಮೇಲೆ ಅಪರಿಮಿತವಾದ ವಿಶ್ವಾಸ. ಗುರುಗಳ ವಿಶ್ವಾಸಕ್ಕೆ ಪಾತ್ರರಾದ ಶಿಷ್ಯರ ಅಭಿವೃದ್ಧಿಗೆ ಅಂತವೇ ಇಲ್ಲ. ಇದು ಸತ್ಯ . ಇದಕ್ಕೆ ಸತ್ಯವ್ರತತೀರ್ಥರೇ ದೃಷ್ಟಾಂತ.

ವಿದ್ಯಾಧೀಶತೀರ್ಥರು ಯಾತ್ರೆಗೆ ಹೊರಡುವಾಗ ಶ್ರೀಮನ್ಮೂಲಸೀತಾ-ಸಮೇತ ಮೂಲರಾಮಚಂದ್ರ, ವ್ಯಾಸಮುಷ್ಟಿಗಳು ಇವುಗಳನ್ನು ವೇದನಿಧಿಗಳಿಗೆ ನೀಡಿದರು. ದಿಗ್ವಿಜಯರಾಮಚಂದ್ರದೇವರ ಪ್ರತಿಮೆಯನ್ನು ತೆಗೆದುಕೊಂಡು ಬದರೀಯಾತ್ರೆ ಪ್ರಾರಂಭಿಸಿದ್ದಾರೆ. ಯಾತ್ರೆ ಎಲ್ಲವೂ ಮುಕ್ತಾಯವಾಯಿತು. ಏಕಚಕ್ರನಗರದ ಹತ್ತಿರ ಬಂದಿದ್ದಾರೆ. ವಿದ್ಯಾಧೀಶರಿಗೆ ದೇಹಾಲಸ್ಯವಾಯಿತು. ಹತ್ತಿರ ಪಟ್ಟದ ಶಿಷ್ಯರಾದ ವೇದನಿಧಿಗಳು ಇಲ್ಲ. ಸಂಸ್ಥಾನದ ಪ್ರತಿಮೆ ತಮ್ಮಲ್ಲಿಯೇ ಇದೆ. ತಮ್ಮ ಹತ್ತಿರ ಇರುವ ಸಂಸ್ಥಾನದ ಪೆಟ್ಟಿಗೆಯನ್ನು ಸತ್ಯವ್ರತತೀರ್ಥರಿಗೆ ನೀಡಿದರು. ಇದನ್ನು ವೇದನಿಧಿಗಳಿಗೆ ತಲುಪಿಸಬೇಕೆಂದು ಆದೇಶ ಮಾಡಿದರು. ಅಲ್ಲಿಯೇ ವೃಂದಾವನಸ್ಥರಾದರು.

Rarest Archiver

ಸತ್ಯವ್ರತತೀರ್ಥರು ಗುರುಗಳ ಆದೇಶವನ್ನು ಪಾಲಿಸಲು ಬದ್ಧರಾದರು. ಅವರಿಗೆ ಹೇಳುವವರು ಕೇಳುವವರು ಯಾರೂ ಇರಲಿಲ್ಲ. ತಮ್ಮ ಕೈಗೆ ಬಂದಿರುವ ಸಂಸ್ಥಾನವನ್ನು ತಾವೇ ಪಾಲಿಸಬಹುದಾಗಿತ್ತು. ಆದರೇ ಪರಿಶುದ್ಧವಾದ ಅವರ ಮನಸ್ಸು ಆ ಅಸತ್ಯದಿಂದ ಮಲಿನವಾಗಲಿಲ್ಲ. ಗುರುಗಳಿಗೆ ವಿರೋಧವನ್ನು ಬಯಸಲು ಅವರು ಸಿದ್ಧರಾಗಲಿಲ್ಲ. ಗುರುಗಳ ಅಪೇಕ್ಷೆಯನ್ನು ಮುರಿಯುವ ವಿಚಾರವು ಅವರಿಗೆ ಬರಲೇ ಇಲ್ಲ. ಆ ಸಂಸ್ಥಾನವನ್ನು ತಂದು ನೇರವಾಗಿ ಶ್ರೀವೇದನಿಧಿತೀರ್ಥರಿಗೆ ಸಮರ್ಪಿಸಿದರು.

ವೇದನಿಧಿತೀರ್ಥರಿಗೆ ಆಶ್ಚರ್ಯವಾಯಿತು. ಅಪರಿಮಿತವಾದ ಸಂತೋಷವೂ ಆಯಿತು. ಇದಲ್ಲವೇ ಗುರುಭಕ್ತಿ ಅಂದರೇ? ಇದಲ್ಲವೇ ವೈರಾಗ್ಯವೆಂದರೇ? ಅಂದುಕೊಂಡರು. ತಮ್ಮ ನಂತರ ಸತ್ಯವ್ರತತೀರ್ಥರಿಗೆ ಅತ್ಯಂತ ಅಪರೂಪವಾದ ಈ ವೇದಾಂತಸಾಮ್ರಾಜ್ಯದಲ್ಲಿ ಅಭಿಷೇಕ ಮಾಡಿದರು. ಸಮಸ್ತ ಸಂಸ್ಥಾನವನ್ನು ಅವರಿಗೆ ಒಪ್ಪಿಸಿದರು. ತಾವು ಇಹಲೋಕದ ಕಾರ್ಯಕ್ಕೆ ಮಂಗಳ ಹಾಡಿದರು. ನಂತರ ಶ್ರೀಸತ್ಯವ್ರತತೀರ್ಥರು ವೈಭವವಾಗಿ ಈ ವೇದಾಂತಸಾಮ್ರಾಜ್ಯವನ್ನು ಪರಿಪಾಲಿಸಿದರು.

Rarest Archiver

**ವೃಂದಾವನ ಮಹಿಮೆ**

ಶ್ರೀಸತ್ಯನಾಥತೀರ್ಥ ಶ್ರೀಪಾದಂಗಳವರು ಪೂರ್ವಾಶ್ರಮದಲ್ಲಿ ನರಸಿಂಹಾಚಾರ್ಯರೆಂದು ಸುಪ್ರಸಿದ್ಧರಾಗಿದ್ದರು. ಇವರು ಶ್ರೀವೇದವ್ಯಾಸ-ತೀರ್ಥರ ಶಿಷ್ಯರಾದ ಕೃಷ್ಣದ್ವೈಪಾಯನರಿಂದ ಆಶ್ರಮವನ್ನು ಸ್ವೀಕರಿಸಿದರು. ವಿದ್ಯಾನಾಥತೀರ್ಥರೆಂದು ಪ್ರಸಿದ್ಧರಾದರು. ನಂತರ ವೇದನಿಧಿತೀರ್ಥರಿಂದ ದಂಡವ್ಯತ್ಯಾಸ ಮಾಡಿಕೊಂಡು ರಂಗನಾಥತೀರ್ಥರೆಂದು ಸುಪ್ರಸಿದ್ಧರಾದರು.

ಸಾಂಗಲಿಯಲ್ಲಿಯೇ ಇದ್ದು ಶ್ರೀಸತ್ಯವ್ರತರ ಸೇವೆಯನ್ನು ಮಾಡಬೇಕೆಂದು ಗುರುಗಳಾದ ವೇದನಿಧಿತೀರ್ಥರು ತಮ್ಮ ಶಿಷ್ಯರಾದ ರಂಗನಾಥಯತಿಗಳಿಗೆ ಆದೇಶ ನೀಡಿದರು. ರಂಗನಾಥಯತಿಗಳು ಗುರುಗಳ ಆದೇಶಕ್ಕೆ ಬದ್ಧರಾದರು. 14 ವರ್ಷಗಳ ತನಕ ಸಾಂಗಲಿಯಲ್ಲಿಯೇ ವಾಸಮಾಡಿದರು. ಅಭಿಷೇಕಾದಿ-ಗಳನ್ನು ಮಾಡುವ ಮೂಲಕ ವೃಂದಾವನದ ಸೇವೆಯನ್ನು ಮಾಡಿದರು. ಶ್ರೀಮದಾಚಾರ್ಯರ ಸಚ್ಛಾಸ್ತ್ರಗಳ ಪಾಠಪ್ರವಚನಗಳಿಂದ ಶ್ರೀಸತ್ಯವ್ರತರನ್ನು ಸಂತೋಷಪಡಿಸಿದರು. ಈ ಸೇವೆಯಿಂದ ಸತ್ಯವ್ರತತೀರ್ಥರು ಪ್ರಸನ್ನರಾದರು. ವೇದಾಂತಸಾಮ್ರಾಜ್ಯವನ್ನೇ ಸೇವೆಯ ಫಲವನ್ನಾಗಿ ನೀಡಿದರು.

Rarest Archives

ಸತ್ಯನಾಥರ ನಾಮಸ್ಮರಣೆಯಿಂದ ಎಲ್ಲ ಅಪೇಕ್ಷೆಗಳು ಸಿದ್ಧಿಸುತ್ತವೆ. ಅಂಥ ಮಹನೀಯರು ಸತ್ಯವ್ರತತೀರ್ಥರ ಸೇವೆಯನ್ನು ಮಾಡಿ ಸಿದ್ಧಿಯನ್ನು ಪಡೆದಿದ್ದಾರೆ. ಶ್ರೀಸತ್ಯವ್ರತತೀರ್ಥರ ಮಹಿಮೆಯು ಅತ್ಯಂತ ಅದ್ಭುತವಾಗಿದೆ.

ಸತ್ಯಪರಾಕ್ರಮತೀರ್ಥರು ಕೂಡಾ ಶ್ರೀಸತ್ಯವ್ರತರ ವಿಶಿಷ್ಟವಾದ ಸೇವೆಯನ್ನು ಮಾಡುವ ಮೂಲಕ ವೈಶಿಷ್ಟ್ಯವನ್ನು ಪಡೆದಿದ್ದಾರೆ. ಹೀಗೆ ಅನೇಕ ಮಹಾನುಭಾವರನ್ನು ಹರಿಸಿದ ಇವರ ಮಹಿಮೆ ಅಪಾರವಾಗಿದೆ. ಇಂಥ ಗುರುಗಳ ಸ್ತೋತ್ರವನ್ನು ಶ್ರೀಸತ್ಯಪರಾಕ್ರಮತೀರ್ಥರು ಮಾಡಿದ್ದಾರೆ.

ಪ್ರಕೃತ ಕನ್ನಡ ಅನುವಾದದೊಂದಿಗೆ ಈ ಕೃತಿ ನಿಮ್ಮ ಕೈಸೇರಿದೆ. ಇದರ ಸದುಪಯೋಗ ಎಲ್ಲರೂ ಪಡೆಯಬೇಕು.

★★★

Rarest Archiver

ಶ್ರೀಸತ್ಯಪರಾಕ್ರಮತೀರ್ಥವಿರಚಿತಂ

# ಶ್ರೀ ಸತ್ಯವ್ರತತೀರ್ಥಸ್ತೋತ್ರಮ್

ಶ್ರೀಮದ್ವಿಷ್ಣುಪದೋದ್ಭಾಸಂ ಯಶೋಭಾಸಾ ಸದೋಜ್ಜ್ವಲಮ್ ।
ಅಕಲಂಕಂ ಶ್ರಯೇ ಶಾಂತ್ಯೈ ಸತ್ಯವ್ರತಸುಧಾಕರಮ್ ॥1॥

ನಿತ್ಯಂ ಪ್ರಸನ್ನಂ ಭಗವತ್ಸತ್ಯವತ್ಯಾತ್ಮಜಪ್ರಿಯಮ್ ।
ಅತ್ಯದ್ಭುತೋರುಮಾಹಾತ್ಮ್ಯಂ ಭಜೇ ಸತ್ಯವ್ರತಂ ಗುರುಮ್ ॥2॥

ಸುಧಾವಿವೃತಿಕರ್ತಾರಂ ವಸುಧಾದೇವಪೂಜಿತಮ್ ।
ಮೇಧಾವಿಸ್ತುತವೈದುಷ್ಯಂ ಸೇವೇ ಸತ್ಯವ್ರತಂ ಗುರುಮ್ ॥3॥

ಸರ್ವಾಭೀಷ್ಟಪ್ರದಾತಾರಂ ಸರ್ವಾನಿಷ್ಟನಿವಾರಕಮ್ ।
ಗೀರ್ವಾಣಗೇಯಚರಿತಂ ನೌಮಿ ಸತ್ಯವ್ರತಂ ಗುರುಮ್ ॥4॥

Rarest Archiver

ಕೃಷ್ಣಾಂಘ್ರಿಪದ್ಮಮಧುಪಂ ಕೃಷ್ಣಾರೋಧಸಿ ಭಾಸುರಮ್ ।
ಕೃಷ್ಣವರ್ತ್ಮನಿಭಂ ಪಾಪತೂಲರಾಶೌ ಗುರುಂ ಶ್ರಯೇ ॥5॥

ವಂದಾರುವೃಂದಾರಕನಂದನದ್ರುಂ ವೃಂದಾವನೇಽಲಂ ಭಜತಾಂ ಜನಾನಾಮ್ ।
ವೃಂದಾವನೇ ಸಂತತಜಾಗರೂಕಂ ಕರ್ಮಂದಿವೃಂದಾರಕಮಾನತೋಽಸ್ಮಿ ॥

ಸತ್ಸಂಧತೀರ್ಥಮುನಿಭಿಃ ಕ್ರಿಯಮಾಣಮೂಲ-
ರಾಮಾರ್ಚನೇ ಪ್ರಮದತಃ ಶಿರಸೋ ನಿತಾಂತಮ್ ।
ಆಂದೋಲನಾತ್ಸಪದಿ ಯಸ್ಯ ಚಚಾಲ ಭವ್ಯಂ
ವೃಂದಾವನಂ ತಮಿಹ ನೌಮಿ ಮಹಾನುಭಾವಮ್ ॥7॥

ವಚಸ್ಸತ್ಯಂ ವ್ರತಂ ಸತ್ಯಂ ಸತ್ಯಶ್ಚ ಮಹಿಮಾಽದ್ಭುತಃ ।
ಅತಃ ಸಾರ್ಥಾಭಿಧಂ ಸೇವೇ ಶ್ರೀಸತ್ಯವ್ರತಸದ್ಗುರುಮ್ ॥8॥

ಯತ್ಕೀರ್ತಿಶ್ರವಣಂ ಮಹಾರ್ತಿಹರಣಂ ಪ್ರಜ್ಞಾನವಿಸ್ಫೂರ್ತಿದಮ್ ।
ಯತ್ಪಾದೋದಕಸೇವನಂ ನವನವಶ್ವಃಶ್ರೇಯಸೋದ್ಭಾವನಮ್ ॥9॥

Rarest Archiver

ಯದ್ಧಸ್ತೋದಕಪಾವನೌದನಮಹೋ ಸಚ್ಛಾಂತಿಸಂತಾನದಮ್
ಶ್ರೀಸತ್ಯವ್ರತಯೋಗಿನಂ ನತಜನಃಶ್ರೇಯೋವ್ರತಂ ತಂ ಶ್ರಯೇ ||10||

ಅಂಧೋಽಪಿ ಸೂಕ್ಷ್ಮದೃಷ್ಟಿಃ ಸ್ಯಾತ್ ವಂಧ್ಯಾ ಸ್ಯಾದಿಷ್ಟಸಂತತಿಃ ।
ಮೂಕೋ ವಾಗ್ಮಿತ್ವಮಾಪ್ನೋತಿ ಶ್ರೀಸತ್ಯವ್ರತಸೇವಯಾ ||10||

ರೋಗೀ ಬಲವದಾರೋಗ್ಯಭಾಗ್ಯಭೋಗೀ ಭವೇದ್ಧ್ರುವಮ್ ।
ಬಧಿರೋ ಮಧುರಾಲಾಪಶ್ರವಣಾತ್ ಸುಖಮಾಪ್ನುಯಾತ್ ||11||

ಅಜ್ಞಂ ಕರೋತಿ ಯಃ ಪ್ರಾಜ್ಞಂ ರಂಕಂ ರಾಜಾಧಿಕಂ ಶ್ರಿಯಾ ।
ವಿಪನ್ನಂ ಸುಖಸಂಪನ್ನಂ ತಂ ಶ್ರೀಸತ್ಯವ್ರತಂ ಭಜೇ ||12||

ಸರ್ವಸಂಪತ್ಪ್ರದಾತಾರಂ ಸರ್ವಾಪತ್ಪರಿಹಾರಕಮ್ ।
ಕರುಣಾವರುಣಾಗಾರಂ ಸೇವೇ ಸತ್ಯವ್ರತಂ ಗುರುಮ್ ||13||

ಸ್ಮರಣಂ ದುರಿತೌಘಾದ್ರಿದಾರಣೇ ದಾರುಣಾಶನಿಃ ।
ಚಿಂತನಂ ಚ ಗುರೋರ್ಭಕ್ತಚಿಂತಾಶತನಿಕೃಂತನಮ್ ||14||

Rarest Archiver

ಪ್ರದಕ್ಷಿಣಾಸ್ತಥಾಽಕ್ಷೀಣಫಲದಾನವಿಚಕ್ಷಣಾಃ ।
ನಮಸ್ಕಾರಾಸ್ಸುಸತ್ಕಾರಪುರಸ್ಕಾರಪ್ರದಾ ಧ್ರುವಮ್ ॥15॥

ಸ್ತೋತ್ರಮೇತತ್ಪಠನ್ನಿತ್ಯಂ ಭಕ್ತ್ಯಾ ಸೇವಾಂ ಕರೋತಿ ಯಃ ।
ತಸ್ಯ ಪ್ರಸನ್ನೋಽಭೀಷ್ಟಾನಿ ದದಾತಿ ಮುನಿರಾಡ್ಗುರುಃ ॥16॥

ಸತ್ಯವ್ರತಾನುಕಂಪಾಪ್ತಸದ್ಯೋವಿದ್ಯಾವಿಲಾಸಿನಾ ।
ಸತ್ಪರಾಕ್ರಮತೀರ್ಥೇನ ಕೃತಂ ಸ್ತೋತ್ರಮಿದಂ ಶುಭಮ್ ॥17॥

॥ ಇತಿ ಶ್ರೀ ಸತ್ಯಪರಾಕ್ರಮತೀರ್ಥವಿರಚಿತಂ ಶ್ರೀ ಸತ್ಯವ್ರತಸ್ತೋತ್ರಮ್ ॥

★★★

Rarest Archiver

ಅಥ ಮಹಾವ್ಯಾಘ್ರಗೋಪಾಲಾಚಾರ್ಯೈಃ ವಿರಚಿತಂ

# ಶ್ರೀಸತ್ಯವ್ರತಾಷ್ಟಕಮ್

ಶುದ್ಧಾನಂದವಿಮುಕ್ತಿದಾಯಕಮರುತ್ಸಿದ್ಧಾಂತಸಂವರ್ಧನೇ
ಶ್ರದ್ಧಾವಜ್ಜನತೋದ್ಧೃತಾವಪಿ ದೃಢಂ ಬದ್ಧಾದರಾಃ ಸಂತತಮ್ ।
ಕ್ರುದ್ಧಾಶೇಷಕುವಾದಿದರ್ಪದಲನೇ ಬದ್ಧಾತ್ಮಮಧ್ಯಾಸ್ತಪ-
ಸ್ಸಿದ್ಧಾ ದದ್ಯುರವದ್ಯಹೀನಧಿಷಣಾಮದ್ಧಾಶು ಸತ್ಯವ್ರತಾಃ ॥1॥

ಶಕ್ತಿಃ ಕುಂಠಮುಪೈತಿ ಹಂತ ವಿಷಯಾಸಕ್ತಿರ್ಮುಹುರ್ವರ್ಧತೇ
ಭಕ್ತಿರ್ನೇಶಪದೇ ದೃಢಾ ಭವತಿ ಮೇ ವ್ಯಕ್ತಿಃ ಫಲಸ್ಯಾಂಹಸಾಮ್ ।
ಯುಕ್ತಿರ್ಮೇ ನ ಹಿ ಭಾಸತೇ ಭವಭಯಾನ್ಮುಕ್ತಿಪ್ರಸಕ್ತಾವಪಿ
ಸೂಕ್ತಿಸ್ತೇ ವರರೂಪಿಣೇ ಸುಖತತೇರ್ಭುಕ್ತಿಪ್ರದಾ ಮೇ ಗುರೋ ॥2॥

ದ್ರಾಗಾಕ್ರಮ್ಯ ವಪುರ್ಬಲೋಜ್ಝಿತಮಿದಂ ರೋಗಾ ವಿತನ್ವಂತಿ ಮೇ
ರಾಗಾಂಧಂ ವಶತಾಮುಪೈತಿ ನ ಮನೋ ಮಾಗಾರದಾರಾದಿಷು ।

Rarest Archiver

ವೇಗಾದ್ದುರ್ವಿಷಯೇಷು ಧಾವತಿತರಾಂ ನೋ ಗಾಹತೇ ಸತ್ಕೃತೌ
ಯೋಗಾರೂಢ ಮುನೀಶ ತೇ ನ ಕರುಣಾಯೋಗಾದ್ವಿನಾ ಮೇ ಗತಿಃ ॥3॥

ಕೃಷ್ಣಾತೀರವಿರಾಜಿಸಾಂಗಲಿಪುರೇಽನುಷ್ಣಾಂಶುಶಾಂತದ್ಯುತಿಃ
ಕೃಷ್ಣಾಂಘ್ರ್ಯಂಬುರುಹೈಕಚಿಂತನಪರಃ ತೃಷ್ಣಾದಿದೋಷೋಜ್ಝಿತಃ ।
ಕೃಷ್ಣಾತ್ಮಾಸುರವಾದಿಭೇದನವಿಧೌ ನಿಷ್ಣಾತಮೇಧಾವಲಃ
ವಿಷ್ಣಾವುತ್ಕಟಭಕ್ತಿಸಂಪದಮಲಂ ಪುಷ್ಣಾತು ಮೇ ಶ್ರೀಗುರುಃ ॥4॥

ಯೋ ಮಾನ್ಯೋತ್ತಮಸತ್ಯಸಂಧಮುನಿಪೇ ರಾಮಾರ್ಚನಾತತ್ಪರೇ
ಸೀಮಾತೀತಸುಖಾದಚಾಲಯದತಿಸ್ಥೇಮಾಽಪಿ ವೃಂದಾವನಮ್ ।
ಕಾಮಾದಿಪ್ರಬಲಾರಿವರ್ಗದಮನಃ ಕಾಮಾನ್ ಸತಾಂ ಪೂರಯನ್
ಕ್ಷೇಮಾಯಾಸ್ತು ಮುನೀಶ್ವರೋ ಮಮ ನೃಪಸ್ತೋಮಾರ್ಚಿತಃ ಸಂತತಮ್ ॥5॥

ಕಾಸಶ್ವಾಸಮುಖೋರುರೋಗಹರಣೇ ಸ್ವಾಸನ್ನಭಕ್ತಾವಲೇಃ
ನಾಸತ್ಯೋಪಮಸದ್ಗುರೋರ್ಹಿ ಮಹಿಮಾ ನಾಸತ್ಯ ಆಸೀತ್ ಕ್ವಚಿತ್ ।

Rarest Archiver

ವ್ಯಾಸಕ್ತಾಮಲಚಿತ್ತ ವೇದನಿವಹವ್ಯಾಸಸ್ಯ ಪಾದಾಂಬುಜೇ
ಶ್ರೀಸತ್ಯವ್ರತತೀರ್ಥ ಪಾಹಿ ಕೃಪಯಾ ಮೇ ಸರ್ವದಾಭೀಷ್ಟದಃ ॥6॥

ಧರ್ತಾ ಸದ್ಗುಣಭೂಷಣಸ್ಯ ಚ ಸಮುದ್ಧರ್ತಾ ಭವಾಬ್ಧೇಃ ಸತಾಮ್
ಸ್ಮರ್ತಾ ಪಾದಪಯೋಜಯೋಃ ರಘುಪತೇರ್ಹರ್ತಾ ಚ ಪಾಪಾವಲೇಃ ।
ಭರ್ತಾ ಪಂಡಿತಮಂಡಲಸ್ಯ ಹಿ ಪುರಸ್ಸರ್ತಾ ಚ ವಾದಾಹವೇ
ಕರ್ತಾ ಶಾಸ್ತ್ರಕೃತೇಃ ಸದಾಽವತು ಮಹಾನಾರ್ತಾನ್ಮದಾದೀನ್ ಗುರುಃ ॥7॥

ಶರ್ವಾರಾಧ್ಯರಮೇಶಭಕ್ತಿಭರಿತಾಃ ಖರ್ವಾನ್ಯಗರ್ವಾವಹ-
ದುರ್ವಾರಾದಿಕ್ಷಪಣಕ್ಷಮಾಃ ಪದಜುಷಾಂ ಸರ್ವಾರ್ಥಸಂದಾಯಿನಃ ।
ಪೂರ್ವಾಚಾರ್ಯಪರಂಪರಾಗತತಪಃಪೂರ್ವಾಮಲೋದ್ಯದ್ಗುಣಾ-
ಪೂರ್ವಾದುಚ್ಚಗತಿಂ ಗತಾ ಗುರುವರಾಃ ಸ್ಯುರ್ವಾಂಛಿತಪ್ರಾಪ್ತಯೇ ॥8॥

ಸತ್ಯವ್ರತವ್ರತಿಶ್ರೇಷ್ಠಸ್ತುತಿರೂಪಾಷ್ಟಕಂ ಶುಭಮ್ ।
ಪಠತಾಮಿಷ್ಟದಮಿದಂ ತುಷ್ಟಿಪುಷ್ಟಿಕರಂ ಸದಾ ॥9॥

॥ ಇತಿ ಮಹಾವ್ಯಾಘ್ರಗೋಪಾಲಾಚಾರ್ಯೈಃ ವಿರಚಿತಂ ಶ್ರೀಸತ್ಯವ್ರತತೀರ್ಥಸ್ತೋತ್ರಮ್ ॥

Rarest Archiver

# ಶ್ರೀ ಶ್ರೀಮತ್ಸತ್ಯವ್ರತತೀರ್ಥ ಯತಿವರಸ್ತವಾಷ್ಟಕಮ್

ನಿತ್ಯಂ ತಪೋನಿರತಮತ್ಯರ್ಥಮೇವ ನತಭೃತ್ಯವ್ರಜಾಪದಹರಂ
ಪ್ರತ್ಯರ್ಥಿವಾದಿಜಯಸಂತ್ಯಕ್ತವಾಕ್‌ಶರಮಮರ್ತ್ಯಪ್ರಭಾವಿಲಸಿತಮ್ ।
ಗತ್ಯರ್ಥಮಾಗತಜನಾತ್ಯರ್ಥದಂ ವಿಬುಧತತ್ಯಾಭಿನುತ್ತಯಶಸಂ
ಶ್ರುತ್ಯರ್ಥವೇದಿವರಸತ್ಯಪ್ರಿಯಂ ಭಜತ ಸತ್ಯವ್ರತಾಮರತರುಮ್ ॥1॥

ಶ್ರೀಸತ್ಯಸಂಧಕೃತರಾಮಸಮರ್ಚನೇನ
ನಿಷ್ಕಂಪಭಕ್ತಿಭರಸಂಜನಿತಾನುಕಂಪಃ ।
ಯೋಽಕಂಪಯತ್ ಸ್ವತನುಸನ್ನಿಧಿದಿವ್ಯತೇಜೋ
ವೃಂದಾವನಂ ತಮಮೃತವ್ರತತೀರ್ಥಮೀಡೇ ॥2॥

ಸತ್ಯವ್ರತಂ ಸತ್ಯಮತ್ಯೈಕನಿಷ್ಠಂ ನಿತ್ಯಂ ರಮೇಶಪ್ರಣುತೀಡ್ಯಕೃತ್ಯಮ್ ।
ಯತ್ಯಗ್ರಗಂ ಸ್ತುತ್ಯಸಮಾಧಿಮಂತಂ ಭೃತ್ಯೇಷ್ಟದಂ ಶ್ರೇಷ್ಠಗುರುಂ ನತೋಽಸ್ಮಿ ॥

Rarest Archiver

ವೇದನಿಧ್ಯಾಬ್ಧಿಸಂಭೂತಂ ವಿದ್ಯಾವಾರಾಶಿಪಾರಗಮ್ ।
ಸತ್ಯನಿಧ್ಯಂತರಾರಾಧ್ಯಂ ಭಕ್ತಚಿಂತಾಮಣಿಂ ಭಜೇ ॥4॥

ವಿದ್ಯಾಧೀಶಪ್ರಶಿಷ್ಯೋಽಯಂ ಶಿಷ್ಯೋ ವೇದನಿಧೇರ್ಗುರೋಃ ।
ಪ್ರಗುರುಸ್ಸತ್ಯನಾಥಸ್ಯ ಗುರುಸ್ಸತ್ಯನಿಧೇರ್ಮಹಾನ್ ॥5॥

ಸುಧಾವಿವೃತಿಕರ್ತಾರಂ ವಸುಧಾವಂದ್ಯವಂದಿತಮ್ ।
ಕಾಮಧೇನುಂ ಸತಾಂ ವಂದೇ ಸತ್ಯವ್ರತಮಹಾಗುರುಮ್ ॥6॥

ಯೋಗಿರಾಜಂ ಮಹಾಯೋಗಶಕ್ತ್ಯಾ ವೃಂದಾವನಸ್ಥಿತಮ್ ।
ಸೇವಮಾನಾಮರತರುಂ ನಿತ್ಯಂ ಸೇವ್ಯಮಹಂ ಭಜೇ ॥7॥

ವೈರಾಗ್ಯೇ ತಪಸಿ ಜ್ಞಾನೇ ಭಕ್ತಾವತ್ಯುಜ್ಜ್ವಲಂ ಭಜೇ ।
ಶುಕಕೌಶಿಕವಾಜ್ಞ್ಯಾಥನಾರದೈಸ್ಸದೃಶಂ ಗುರುಮ್ ॥8॥

ಸ್ತುತ್ಯಷ್ಟಕಮಿದಂ ಭಕ್ತ್ಯಾ ಸತ್ಯವ್ರತಗುರೋರ್ಮಹತ್ ।
ಯಃ ಪಠೇತ್ಪಾಠಯೇದ್ವಾಽಪಿ ಜ್ಞಾನಾದೀನ್ಪ್ರಾಪ್ನುತೇ ಧ್ರುವಮ್ ॥9॥

Rarest Archives

ಅಪುತ್ರೋ ಲಭತೇ ಪುತ್ರಾನ್ ದರಿದ್ರೋ ಧನವಾನ್ ಭವೇತ್ ।
ಭಯಾರ್ತೋ ಮುಚ್ಯತೇ ಭೀತೋ ರೋಗೀ ಮುಚ್ಯೇತ ರೋಗತಃ ॥10॥

ವೃಂದಾವನಸ್ಯ ಶುಶ್ರೂಷಾ ನಮಸ್ಕಾರಾದಿಕಾಽಪಿ ವಾ ।
ಇಹಾಮುತ್ರೇಷ್ಟಫಲದಾ ಸಂಶಯೋ ನಾಸ್ತಿ ಲೇಶತಃ ॥11॥

ಸೇವ್ಯತಾಂ ಸೇವ್ಯತಾಂ ನಿತ್ಯಂ ಸತ್ಯವ್ರತಮಹಾಗುರುಃ ।
ಪ್ರಾಪ್ಯತಾಂ ಪ್ರಾಪ್ಯತಾಂ ಭಕ್ತೈಸ್ಸದೇಷ್ಟಂ ಪ್ರೇಷ್ಠತೋ ಗುರೋಃ ॥12॥

॥ ಇತಿ ಶ್ರೀಸತ್ಯವ್ರತತೀರ್ಥವ್ರತಿವರಸ್ತವಾಷ್ಟಕಮ್ ॥

★★★

Rarest Archiver

ಶ್ರೀಸತ್ಯಪರಾಕ್ರಮತೀರ್ಥವಿರಚಿತಮ್

# ಶ್ರೀ ಸತ್ಯವ್ರತಸ್ತೋತ್ರಮ್

**ಶ್ರೀಮದ್ವಿಷ್ಣುಪದೋದ್ಭಾಸಂ ಯಶೋಭಾಸಾ ಸದೋಜ್ಜ್ವಲಮ್ ।**
**ಅಕಲಂಕಂ ಶ್ರಯೇ ಶಾಂತ್ಯೈ ಸತ್ಯವ್ರತಸುಧಾಕರಮ್ ॥1॥**

**ಅನ್ವಯಾರ್ಥಃ-** **ಶ್ರೀಮದ್ವಿಷ್ಣುಪದೋದ್ಭಾಸಂ** ಸ್ವಪ್ರಕಾಶವಾದ ಭಗವಂತನ ಪಾದಗಳ ಸೇವೆಯಿಂದ ತತ್ತ್ವಜ್ಞಾನವನ್ನು ಪಡೆದಿರುವ **ಯಶೋಭಾಸಾ** ಕೀರ್ತಿ ಎಂಬ ಪ್ರಕಾಶದಿಂದ **ಸದಾ** ಯಾವಾಗಲೂ **ಉಜ್ಜ್ವಲಂ** ಪ್ರಕಾಶಮಾನರಾದ **ಅಕಲಂಕಂ** ಕಲಂಕವೇ ಇಲ್ಲದಿರುವ **ಸತ್ಯವ್ರತಸುಧಾಕರಂ** ಸತ್ಯವ್ರತರೆಂಬ ಚಂದ್ರಮರನ್ನು **ಶಾಂತ್ಯೈ** ಸಂಸಾರಸಂತಾಪದ ಶಾಂತಿಗಾಗಿ **ಶ್ರಯೇ** ಆಶ್ರಯಿಸುತ್ತೇನೆ.

**ತಾತ್ಪರ್ಯ-** ವಿಷ್ಣುಪದ ಎಂದರೇ ಆಕಾಶ ಎಂದು ಅರ್ಥವಿದೆ. ಆಕಾಶದಲ್ಲಿ ಬೆಳಗುವ ಬೆಳಕು ಚಂದ್ರ. ಆ ಚಂದ್ರ ಸುಧಾಕರ. ಅಮೃತದ ಸಿಂಚನವನ್ನು

Rarest Archiver

ಮಾಡಿ ಸರ್ವರ ಸಂತಾಪಗಳನ್ನು ಕಳೆಯುವ ಬೆಳಕು ಚಂದ್ರ. ತನ್ನ ಬೆಳಕಿನಿಂದಲೇ ಸರ್ವತ್ರ ಪ್ರಸಿದ್ಧನಾಗಿದ್ದಾನೆ. ಕಲಂಕ ಇದ್ದರೂ ಎಲ್ಲರಿಗೂ ಬೇಕಾದವನು. ಸಂತಪ್ತರಾದವರು ಆ ಚಂದ್ರನ ಬೆಳಕನ್ನು ಆಶ್ರಯಿಸುತ್ತಾರೆ.

ಮತ್ತೊಂದು ಸುಧಾಕರ ಇದೆ. ಸುಧೆಗೆ ವಿವೃತಿಯನ್ನು ಬರೆದ ಸುಧಾಕರ. ಸುಧಾಕಾರರಿಗೆ ಪ್ರಿಯರಾದ ಸುಧಾಕರ. ಅವರು ಸತ್ಯವ್ರತಸುಧಾಕರ. ಯಾವಾಗಲೂ ವಿಷ್ಣುಪದದಲ್ಲಿಯೇ ವಿಷ್ಣುವಿನ ಪಾದಗಳಲ್ಲಿಯೇ ನಿರತರು. ವಿಷ್ಣುವಿನ ಸ್ವರೂಪವನ್ನು ಪ್ರತಿಪಾದಿಸುವಲ್ಲಿಯೇ ಆಸಕ್ತರು. ಭಗವಂತನ ಸೇವೆಯಿಂದಲೇ ತತ್ತ್ವಜ್ಞಾನಪ್ರಕಾಶವನ್ನು ಪಡೆದವರು ಶ್ರೀಸತ್ಯವ್ರತ ಸುಧಾಕರರು. ಅವರ ಕೀರ್ತಿಯು ಪ್ರಕಾಶದಂತೆ ಸರ್ವತ್ರ ವ್ಯಾಪ್ತ. ಯಾವಾಗಲೂ ಪ್ರಕಾಶಿತರಾದವರು. ತಮ್ಮ ಅಮೃತೋಪದೇಶಗಳಿಂದ, ಅಮೃತಪ್ರಾಯವಾದ ಕೀರ್ತಿಕಿರಣಗಳಿಂದ ಸಂಸಾರದ ಸಂತಾಪವನ್ನು ಪರಿಹರಿಸುತ್ತಾರೆ ಶ್ರೀಸತ್ಯವ್ರತಸುಧಾಕರರು. ಆದ್ದರಿಂದ ನಾನು ಇವರನ್ನು ಆಶ್ರಯಿಸುತ್ತೇನೆ.

Rarest Archiver

**ಸುಧಾಕರನಿಗಿಂತಲೂ ಸತ್ಯವ್ರತಸುಧಾಕರ ಮಿಗಿಲು**

ಮುಗಿಲಿನಲ್ಲಿಯ ಸುಧಾಕರನಿಗೆ ಏಕವಿಧವಾದ ಪ್ರಕಾಶ. ತತ್ತ್ವಜ್ಞಾನ-ಪ್ರಕಾಶ, ಕೀರ್ತಿಪ್ರಕಾಶ ಎಂಬ ಎರಡುವಿಧವಾದ ಪ್ರಕಾಶಗಳಿಂದ ತುಂಬಿದವರು ಸತ್ಯವ್ರತಸುಧಾಕರರು. ಚಂದ್ರನ ಪ್ರಕಾಶ ರಾತ್ರಿ ಮಾತ್ರ ಇರುತ್ತದೆ. ಸತ್ಯವ್ರತಸುಧಾಕರರ ಪ್ರಕಾಶ ಹಗಲು-ರಾತ್ರಿ ಏಕಧಾಟಿಯಿಂದ ಇರುತ್ತದೆ. ಮುಗಿಲಿನಲ್ಲಿಯ ಚಂದ್ರನಲ್ಲಿ ಕಲಂಕ ಇದೆ. ಸತ್ಯವ್ರತಸುಧಾಕರರಲ್ಲಿ ಕಲಂಕವೇ ಇಲ್ಲ. ಹೀಗೆ ಮುಗಿಲಿನಲ್ಲಿಯ ಚಂದ್ರನಿಗೂ ಮಿಗಿಲಾದವರು ಶ್ರೀಸತ್ಯವ್ರತ-ಸುಧಾಕರರು.

**ನಿತ್ಯಂ ಪ್ರಸನ್ನಂ ಭಗವತ್ಸತ್ಯವತ್ಯಾತ್ಮಜಪ್ರಿಯಮ್ ।**
**ಅತ್ಯದ್ಭುತೋರುಮಾಹಾತ್ಮ್ಯಂ ಭಜೇ ಸತ್ಯವ್ರತಂ ಗುರುಮ್ ॥2॥**

ಈ ಶ್ಲೋಕದಲ್ಲಿ ನಿತ್ಯಂ ಎಂಬ ಪದದ ಆವೃತ್ತಿಯನ್ನು ಮಾಡಿಕೊಳ್ಳಬೇಕು.

**ಅನ್ವಯಾರ್ಥಃ-** ನಿತ್ಯಂ ಯಾವಾಗಲೂ ಪ್ರಸನ್ನಂ ಭಕ್ತರನ್ನು ಅನುಗ್ರಹಿಸುವ ಭಗವತ್ಸತ್ಯವತ್ಯಾತ್ಮಜಪ್ರಿಯಂ ಷಡ್ಗುಣಗಳಿಂದ ಪರಿಪೂರ್ಣನಾದ ಸತ್ಯವತಿಯಲ್ಲಿ

Rarest Archiver

ಅವತರಿಸಿದ ವೇದವ್ಯಾಸದೇವರಿಗೆ ಅತ್ಯಂತ ಪ್ರಿಯರಾದ **ಅತ್ಯದ್ಭುತೋರುಮಾಹಾತ್ಮ್ಯಂ** ಅತ್ಯಂತ ಅದ್ಭುತವಾದ ಉತ್ಕೃಷ್ಟವಾದ ಮಹಿಮೆಯುಳ್ಳ **ಗುರುಂ** ಗುರುಗಳಾದ **ಸತ್ಯವ್ರತಂ** ಸತ್ಯವ್ರತತೀರ್ಥರನ್ನು **ನಿತ್ಯಂ** ಯಾವಾಗಲೂ **ಭಜೇ** ಸೇವಿಸುತ್ತೇನೆ. ||2||

**ತಾತ್ಪರ್ಯ**- ವಿರಕ್ತರಾದ ಶ್ರೀಸತ್ಯವ್ರತರಿಗೆ ವಿರಾಮವೆಂಬುದೇ ಇಲ್ಲ. ನಿರಂತರವೂ ಭಕ್ತರನ್ನು ಅನುಗ್ರಸಿಸುತ್ತಲೇ ಇರುತ್ತಾರೆ. ಮೂಲರಾಮನ ಆರಾಧಕರಿಗೆ ವಿರಾಮ ಸೊಗಸುವುದೇ ಇಲ್ಲ.

ವಿಷ್ಣುವು ಸತ್ಯವತಿಯಲ್ಲಿ ಅವತಾರವನ್ನು ತಾಳಿದ. ವೇದವ್ಯಾಸನಾಗಿ ಅಜ್ಞಾನದಲ್ಲಿ ತೊಳಲುತ್ತಿರುವ ಸಜ್ಜನರನ್ನು ಉದ್ಧರಿಸಿದ. ಆ ವೇದವ್ಯಾಸ ಭಗವಂತ. ಸಮಗ್ರವಾದ ಸಾಮರ್ಥ್ಯ, ಮೇರೆಯೇ ಇಲ್ಲದ ವೀರ್ಯ, ಅವಸಾನವಿಲ್ಲದ ಯಶಸ್ಸು, ಅಸಮಾನವಾದ ಸಂಪತ್ತು, ಅಸದೃಶವಾದ ಅರಿವು, ಅನುಪಮವಾದ ವೈರಾಗ್ಯ ಈ ಆರುಗುಣಗಳಿಂದ ಸಂಪನ್ನನಾಗಿದ್ದಾರೆ ವೇದವ್ಯಾಸರು. ಹೀಗೆ ಅನಂತಗುಣಗಳಿಗೆ ಆಸ್ಪದರಾಗಿದ್ದಾರೆ. ಇಂಥ

Rarest Archiver

ಭಗವಂತನಿಗೆ ಅತ್ಯಂತ ಪ್ರಿಯರಾದವರು ಶ್ರೀಸತ್ಯವ್ರತರು. ಸುಧಾವಿವೃತಿಯನ್ನು ವಿರಚಿಸುವ ಮೂಲಕ ವ್ಯಾಸವಾಙ್ಮಯ ಸೇವೆ ಮಾಡಿದ್ದಕ್ಕಾಗಿ ವ್ಯಾಸರ ಸಂಪ್ರೀತಿಯನ್ನು ಪಡೆದಿದ್ದಾರೆ.

ಈ ಗುರುಗಳ ಮಹಿಮೆಗೆ ಎಣೆಯಿಲ್ಲ. ಕೊನೆ ಇಲ್ಲ. ಇವರ ಪ್ರತಿಯೊಂದು ಚರ್ಯೆಯೂ ಮಹಿಮೆ. ಈ ಗುರುಗಳ ಮಹಿಮೆ ಉರುಮಹಿಮೆ. ಆ ಉರುಮಹಿಮೆಯೂ ಅತ್ಯದ್ಭುತ. ಅನ್ಯಾದೃಶ. ಇಂಥ ಸತ್ಯವ್ರತರ ಸೇವೆ ನನಗೆ ಸಾಕೆನಿಸುವುದೇ ಇಲ್ಲ. ನಿರಂತರವೂ ಇವರ ಸೇವೆಯನ್ನು ಮಾಡಲೇ ಬೇಕೆನಿಸುತ್ತದೆ. ಪ್ರತಿಕ್ಷಣವೂ ಸೇವೆಯ ಬಯಕೆಯನ್ನು ಬೆಳೆಸುವಷ್ಟು ಘನ ಮಹಿಮೆ ಇವರದು. ನಿತ್ಯವೂ ನಿರಂತರವೂ ಶ್ರೀಸತ್ಯವ್ರತರ ಸೇವೆಯಲ್ಲಿಯೇ ಬಾಳುತ್ತೇನೆ. ಅದರಿಂದಲೇ ನಾನು ಬೆಳಗುತ್ತೇನೆ.

**ಸುಧಾವಿವೃತಿಕರ್ತಾರಂ ವಸುಧಾದೇವಪೂಜಿತಮ್ ।**
**ಮೇಧಾವಿಸ್ತುತವೈದುಷ್ಯಂ ಸೇವೇ ಸತ್ಯವ್ರತಂ ಗುರುಮ್ ॥3॥**

Rarest Archiver

**ಅನ್ವಯಾರ್ಥಃ- ಸುಧಾವಿವೃತಿಕರ್ತಾರಂ** ಶ್ರೀಮನ್ನ್ಯಾಯಸುಧಾ ಗ್ರಂಥಕ್ಕೆ ವಿವರಣ ರೂಪವಾದ ಸುಧಾವಿವೃತಿ ಎಂಬ ಟಿಪ್ಪಣಿಯನ್ನು ರಚಿಸಿರುವ (ಅತ ಏವ ಆದ್ದರಿಂದಲೇ) **ವಸುಧಾದೇವಪೂಜಿತಂ** ಭೂತಲದಲ್ಲಿ ದೇವತೆಗಳಂತೆ ಇರುವ ಬ್ರಾಹ್ಮಣರಿಂದ ಪೂಜ್ಯರಾದ **ಮೇಧಾವಿಸ್ತುತವೈದುಷ್ಯಂ** ಮೇಧಾವಿಗಳಿಂದಲೂ ಸ್ತುತ್ಯವಾದ ವಿದ್ವತ್ತಿನಿಂದ ಯುಕ್ತರಾದ **ಗುರುಂ** ಗುರುಗಳಾದ **ಸತ್ಯವ್ರತಂ** ಸತ್ಯವ್ರತತೀರ್ಥರನ್ನು **ಸೇವೇ** ಸೇವಿಸುತ್ತೇನೆ. ॥3॥

**ತಾತ್ಪರ್ಯ-** ಶ್ರೀಸತ್ಯವ್ರತತೀರ್ಥರು ಶ್ರೀಮನ್ನ್ಯಾಯಸುಧಾ ಗ್ರಂಥಕ್ಕೆ ಸುಧಾವಿವೃತಿ ಎಂಬ ಟಿಪ್ಪಣಿಯನ್ನು ರಚಿಸಿದ್ದಾರೆ. ಅತ್ಯಂತ ಅಪರೂಪವಾದ ಟಿಪ್ಪಣಿ ಇದು. ಈ ಟಿಪ್ಪಣಿಯನ್ನು ಅವಲೋಕಿಸಿದ ವಿದ್ವಾಂಸರೆಲ್ಲರೂ ಅವರ ವೈದುಷ್ಯಕ್ಕೆ ದಾಸೋಹರಾಗುತ್ತಾರೆ. ಎಲ್ಲರ ಅಹಮಿಕೆಯನ್ನು ಪ್ರಶಾಂತಗೊಳಿಸುವ ಪ್ರವೀಣ ಈ ಸುಧಾವಿವೃತಿ. ಈ ಗ್ರಂಥವನ್ನು ಅವಲೋಕನ ಮಾಡಿದ ವಸುಧಾದೇವತೆಗಳೆನಿಸಿದ ವಿದ್ವದ್ವಿಪ್ರರು ಇವರನ್ನು ಪೂಜಿಸುತ್ತಾರೆ. ಶ್ರೀಸತ್ಯವ್ರತರನ್ನು ಆದರದಿಂದ ಆರಾಧಿಸ್ತುತಾರೆ. ಮೇಧಾವಿಮೂರ್ಧನ್ಯ-

Rarest Archiver

ರೆಲ್ಲರೂ ಇವರ ವೈದುಷ್ಯವನ್ನು ಸ್ತುತಿಸುತ್ತಾರೆ. ಆ ವೈದುಷ್ಯದ ದಾಸರಾಗುತ್ತಾರೆ. ಇಂಥ ಗುರುಗಳಾದ ಶ್ರೀಸತ್ಯವ್ರತತೀರ್ಥರನ್ನು ಸದಾ ಸೇವಿಸುತ್ತೇನೆ.

**ಸರ್ವಾಭೀಷ್ಟಪ್ರದಾತಾರಂ ಸರ್ವಾನಿಷ್ಟನಿವಾರಕಮ್ ।**
**ಗೀರ್ವಾಣಗೇಯಚರಿತಂ ನೌಮಿ ಸತ್ಯವ್ರತಂ ಗುರುಮ್ ॥4॥**

**ಅನ್ವಯಾರ್ಥಃ- ಸರ್ವಾಭೀಷ್ಟಪ್ರದಾತಾರಂ** ಭಕ್ತರ ಎಲ್ಲ ಅಭೀಷ್ಟಗಳನ್ನು ಕರುಣೆಯಿಂದ ಪೂರ್ಣಮಾಡುವ **ಸರ್ವಾನಿಷ್ಟನಿವಾರಕಂ** ಎಲ್ಲ ಅಶುಭಗಳನ್ನು ಪರಿಹರಿಸುವ **ಗೀರ್ವಾಣಗೇಯಚರಿತಂ** ದೇವತೆಗಳಿಂದಲೂ ಸ್ತುತಿಸಲು ಯೋಗ್ಯವಾದ ಮಾಹಾತ್ಮ್ಯದಿಂದ ಸಂಪನ್ನರಾದ **ಗುರುಂ** ಗುರುಗಳಾದ **ಸತ್ಯವ್ರತಂ** ಸತ್ಯವ್ರತತೀರ್ಥರನ್ನು **ನೌಮಿ** ನಮಸ್ಕರಿಸುತ್ತೇನೆ. ॥4॥

**ತಾತ್ಪರ್ಯ-** ಶ್ರೀಸತ್ಯವ್ರತತೀರ್ಥರು ಪರಮವಿರಕ್ತಶಿಖಾಮಣಿಗಳು. ಯಾವುದೇ ವಿಷಯಗಳನ್ನು ಅಪೇಕ್ಷಿಸದವರು. ಆದರೂ ಭಕ್ತರು ಬೇಡಿದ ಅಭೀಷ್ಟವನ್ನು ಪೂರ್ಣ ಮಾಡುವಲ್ಲಿ ನಿಸ್ಸೀಮರು. ಭಕ್ತರು ಸನ್ಮಾರ್ಗದಿಂದ ಚ್ಯುತರಾಗದಿರುವಂತೆ ಅವರನ್ನು ಉದ್ಧರಿಸುವ ಪ್ರಜಾಪಾಲಕರು. ವೇದಾಂತ

Rarest Archiver

ಸಾಮ್ರಾಜ್ಯದ ಚಕ್ರವರ್ತಿಗಳು. ತಮ್ಮ ಉಪದೇಶದ ಮೂಲಕ ಅಶುಭವಾದ ಅಜ್ಞಾನ-ವಿಪರೀತಜ್ಞಾನ-ಭ್ರಾಂತಿಗಳನ್ನು ನಿವಾರಿಸುವ ಕರುಣಿಗಳು. ಈ ಗುರುಗಳ ಮಹಿಮೆ ಅಪಾರ. ಇವರ ಮಹಿಮೆಯನ್ನು ಕೊಂಡಾಡಲು ದೇವತೆಗಳೂ ತವಕಿಸುತ್ತಾರೆ. ಇಂಥ ಅಪರಿಮೇಯವಾದ ಚರಿತೆಯಿಂದ ಸಂಪನ್ನರಾಗಿದ್ದಾರೆ. ಇಂಥ ಗುರುಗಳಾದ ಶ್ರೀಸತ್ಯವ್ರತರ ಸೇವೆಯನ್ನು ಮಾಡುತ್ತೇನೆ.

**ಕೃಷ್ಣಾಂಘ್ರಿಪದ್ಮಮಧುಪಂ ಕೃಷ್ಣಾರೋಧಸಿ ಭಾಸುರಮ್ ।**
**ಕೃಷ್ಣವರ್ತ್ಮನಿಭಂ ಪಾಪತೂಲರಾಶೌ ಗುರುಂ ಶ್ರಯೇ ॥5॥**

**ಅನ್ವಯಾರ್ಥಃ- ಕೃಷ್ಣಾಂಘ್ರಿಪದ್ಮಮಧುಪಂ** ಶ್ರೀಕೃಷ್ಣನ ಪಾದಕಮಲಗಳಲ್ಲಿ ಭೃಂಗದಂತೆ ಆಸಕ್ತರಾದ **ಕೃಷ್ಣಾರೋಧಸಿ** ಕೃಷ್ಣಾನದಿಯ ತೀರದಲ್ಲಿ **ಭಾಸುರಂ** ಪ್ರಕಾಶಮಾನರಾದ **ಪಾಪತೂಲರಾಶೌ** ಪಾಪಗಳೆಂಬ ಹತ್ತಿಯ ರಾಶಿಯನ್ನು ಭಸ್ಮಮಾಡುವಲ್ಲಿ **ಕೃಷ್ಣವರ್ತ್ಮನಿಭಂ** ಅಗ್ನಿಯಂತೆ ಇರುವ **ಗುರುಂ** ಗುರುಗಳಾದ ಶ್ರೀಸತ್ಯವ್ರತತೀರ್ಥರನ್ನು **ಶ್ರಯೇ** ಆಶ್ರಯಿಸುತ್ತೇನೆ. ॥5॥

Rarest Archiver

**ತಾತ್ಪರ್ಯ-** ವಿಷಯತೃಷ್ಣೆಯನ್ನು ತ್ಯಜಿಸಿದವರು. ಕೃಷ್ಣನಲ್ಲಿ ತೃಷ್ಣೆಯನ್ನು ಬೆಳೆಸಿಕೊಂಡವರು. ಜಗದ್ಗುರುವಾದ ಕೃಷ್ಣನ ಪಾದಕಮಲಗಳಲ್ಲಿ ಭೃಂಗದಂತೆ ಆಸಕ್ತರು. ಕೃಷ್ಣಾನದೀ ತೀರದಲ್ಲಿ ಪ್ರಕಾಶಿಸುವ ಮಹಾನುಭಾವರು. ಭಕ್ತರು ಮಾಡಿದ ಪಾಪಗಳನ್ನು ಭಸ್ಮಮಾಡಿ ಹಾಕುವ ಅಗ್ನಿಗಳು ಶ್ರೀಸತ್ಯವ್ರತರು. ಇಂಥ ಗುರುಳಾದ ಶ್ರೀಸತ್ಯವ್ರತರ ಆಶ್ರಯದಲ್ಲಿಯೇ ನಾನು ಬಾಳುತ್ತೇನೆ.

**ವಂದಾರುವೃಂದಾರಕನಂದನದ್ರುಂ ವೃಂದಾವನೇಽಲಂ ಭಜತಾಂ ಜನಾನಾಮ್ ।**
**ವೃಂದಾವನೇ ಸಂತತಜಾಗರೂಕಂ ಕರ್ಮಂದಿವೃಂದಾರಕಮಾನತೋಽಸ್ಮಿ ॥6॥**

**ವಿಶೇಷ-** ಈ ಶ್ಲೋಕದಲ್ಲಿ ಸ್ಥಿತಂ ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅದನ್ನು ವೃಂದಾವನೇ ಎಂಬ ಸಪ್ತಮ್ಯಂತವಾದ ಪದದ ಜೊತೆ ಅನ್ವಯ ಮಾಡಿಕೊಳ್ಳಬೇಕು.

**ಅನ್ವಯಾರ್ಥಃ-** ವಂದಾರುವೃಂದಾರಕನಂದನದ್ರುಂ ನಮಸ್ಕರಿಸುವ ಸ್ವಭಾವವಿರುವ ಸಜ್ಜನರಿಗೆ ದೇವತೆಗಳ ನಂದನವನದಲ್ಲಿಯ ಕಲ್ಪವೃಕ್ಷದಂತೆ ಇರುವ ವೃಂದಾವನೇ ವೃಂದಾವನದಲ್ಲಿ (ಸ್ಥಿತಂ ಇರುವ ಈ ಗುರುಗಳನ್ನು)

Rarest Archiver

**ಅಲಂ** ಭಕ್ತಿಯಿಂದ **ಭಜತಾಂ** ಸೇವಿಸುವ **ಜನಾನಾಂ** ಜನರಿಗಾಗಿ **ವೃಂದಾವನೇ** ವೃಂದಾವನದಲ್ಲಿ **ಸಂತತಜಾಗರೂಕಂ** ಯಾವಾಗಲೂ ಜಾಗರೂಕರಾಗಿ ಇರುವ ವಿಶಿಷ್ಟವಾಗಿ ಸನ್ನಿಹಿತರಾದ **ಕರ್ಮಂದಿವೃಂದಾರಕಂ** ಯತಿಶ್ರೇಷ್ಠರಾದ ಶ್ರೀಸತ್ಯವ್ರತತೀರ್ಥರನ್ನು **ಆನತಃ ಅಸ್ಮಿ** ನಮಸ್ಕರಿಸುತ್ತೇನೆ. ||6||

**ತಾತ್ಪರ್ಯ-** ಬೇಡಿದವರ ಇಷ್ಟಾರ್ಥಗಳನ್ನು ಪೂರೈಸುವ ವೃಕ್ಷ ಕಲ್ಪವೃಕ್ಷ. ಆದರೆ ಮನುಷ್ಯರಿಗೆ ಆ ವೃಕ್ಷ ಗಗನಕುಸುಮ. ಆ ವೃಕ್ಷದ ಸೇವೆಯನ್ನು ಮಾಡಲು ಆಗುವುದೇ ಇಲ್ಲ. ಅಭೀಷ್ಟಗಳನ್ನು ಪೂರೈಸಿಕೊಳ್ಳಲಾಗುವುದೇ ಇಲ್ಲ.

ತನ್ನ ಭಕ್ತೆಯಾದ ಸತ್ಯಭಾಮೆ ಪಾರಿಜಾತವನ್ನು ಅಪೇಕ್ಷಿಸಿದಳು. ಅದು ದೇವಲೋಕದ ನಂದನದಲ್ಲಿಯ ಕಲ್ಪವೃಕ್ಷ. ಎಲ್ಲರ ಎಲ್ಲ ಬಯಕೆಗಳನ್ನು ಈಡೇರಿಸುವ ವೃಕ್ಷ ಅದು. ಅಂಥ ವೃಕ್ಷವನ್ನು ಶ್ರೀಕೃಷ್ಣ ಪರಮಾತ್ಮ ಈ ಭೂಮಿಗೆ ತಂದ. ಸತ್ಯಭಾಮೆಯನ್ನು ಸಂತೋಷಪಡಿಸಿದ. ಅದು ದ್ವಾಪರದ ಮಾತಾಯಿತು.

Rarest Archiver

ಕಲಿಯುಗದಲ್ಲಿಯೂ ಇಂಥ ಕಾರ್ಯವನ್ನು ಭಗವಂತ ಮಾಡಿದ್ದಾನೆ. ಕಲಿಯುಗದಲ್ಲಿ ಭಗವಂತ ಅವತರಿಸುವುದಿಲ್ಲ. ಆದರೆ ಭಕ್ತರ ಉದ್ಧಾರಕ್ಕಾಗಿ ಕಾತರಿಸುತ್ತಾನೆ. ಸಜ್ಜನೋದ್ಧಾರಕ್ಕಾಗಿ ದೇವಲೋಕದ ಕಲ್ಪವೃಕ್ಷವನ್ನು ಕಳಿಸುತ್ತಾನೆ. ಆ ಕಲ್ಪವೃಕ್ಷವೇ ಶ್ರೀಸತ್ಯವ್ರತರು. ಸತ್ಯವ್ರತರ ರೂಪದಿಂದ ಕಲ್ಪವೃಕ್ಷವೇ ಭೂತಲವನ್ನು ಸೇರಿದೆ.

ಶ್ರೀಸತ್ಯವ್ರತರು ವೃಂದಾವನ ಸೇರಿದ್ದಾರೆ. ನಮ್ಮ ಮಾತುಗಳು ಅವರಿಗೆ ಕೇಳಿಸುವುದಿಲ್ಲ. ಇತ್ಯಾದಿಯಾಗಿ ಹರಟುತ್ತ ಬಾಲಿಶರಾಗುವುದು ಬೇಡ. ವೃಂದಾವನದಲ್ಲಿ ಗುರುಗಳು ಶ್ರೀಸತ್ಯವ್ರತರು ಸನ್ನಿಹಿತರಾಗಿದ್ದಾರೆ. ಅವರ ಸೇವೆಯನ್ನು ಮಾಡೋಣ. ವೃಂದಾವನದಲ್ಲಿ ಸನ್ನಿಹಿತರಾದ ಗುರುಗಳು ಸನ್ನಿಹಿತರಾದವರನ್ನು ಸಲಹುತ್ತಾರೆ. ಶ್ರೀಸತ್ಯವ್ರತರು ಯತಿಗಳಲ್ಲಿ ಶ್ರೇಷ್ಠರು. ಅಂಥವರು ನನಗೆ ಗುರುಗಳಾಗಿರುವುದು ನನ್ನ ಸೌಭಾಗ್ಯ. ನನ್ನ ಸೌಭಾಗ್ಯವಾದ ಶ್ರೀಸತ್ಯವ್ರತರ ಸೇವೆಯನ್ನು ಜಾಗರೂಕನಾಗಿ ಮಾಡುತ್ತೇನೆ.

Rarest Archiver

ಸತ್ಸಂಧತೀರ್ಥಮುನಿಭಿಃ ಕ್ರಿಯಮಾಣಮೂಲ-
ರಾಮಾರ್ಚನೇ ಪ್ರಮದತಃ ಶಿರಸೋ ನಿತಾಂತಮ್ ।
ಆಂದೋಲನಾತ್ಸಪದಿ ಯಸ್ಯ ಚಚಾಲ ಭವ್ಯಂ
ವೃಂದಾವನಂ ತಮಿಹ ನೌಮಿ ಮಹಾನುಭಾವಮ್ ॥7॥

ಅನ್ವಯಾರ್ಥಃ- ಸತ್ಸಂಧತೀರ್ಥಮುನಿಭಿಃ ಶ್ರೀಸತ್ಯಸಂಧತೀರ್ಥಯತಿಗಳು ಕ್ರಿಯಮಾಣಮೂಲರಾಮಾರ್ಚನೇ ವೃಂದಾವನದ ಸನ್ನಿಧಾನದಲ್ಲಿ ಶ್ರೀಮನ್ಮೂಲರಾಮಚಂದ್ರದೇವರ ಪೂಜೆಯನ್ನು ಮಾಡುವ ಸಂದರ್ಭದಲ್ಲಿ ಪ್ರಮದತಃ (ಆ ಪೂಜಾ ವೈಭವವನ್ನು, ಮತ್ತು ಸಂಸ್ಥಾನದ ಪ್ರತಿಮೆಗಳನ್ನು ಕಂಡು) ಅತ್ಯಂತ ಸಂತೋಷದಿಂದ ಶಿರಸಃ ತಲೆಯನ್ನು ನಿತಾಂತಂ ಅತಿಶಯವಾಗಿ ಆಂದೋಲನಾತ್ ಅಲ್ಲಾಡಿಸುವುದರಿಂದ ಸಪದಿ ಕೂಡಲೇ ಯಸ್ಯ ಯಾವ ಶ್ರೀಸತ್ಯವ್ರತತೀರ್ಥರ ಭವ್ಯಂ ಭವ್ಯವಾದ ವೃಂದಾವನಂ ವೃಂದಾವನವು ಚ ಚಾಲ ಅಲುಗಾಡಿತೋ ತಂ ಅಂಥ ಮಹಾನುಭಾವಂ ಅತಿಶಯವಾದ ಸಾಮರ್ಥ್ಯದಿಂದ ಯುಕ್ತರಾದ ಶ್ರೀಸತ್ಯವ್ರತತೀರ್ಥರನ್ನು ಇಹ ಅವರ ಸನ್ನಿಧಾನದಲ್ಲಿ ಅಥವಾ ಇದ್ದಲ್ಲಿಯೇ ನೌಮಿ ನಮಸ್ಕರಿಸುತ್ತೇನೆ. ॥7॥

Rarest Archiver

ತಾತ್ಪರ್ಯ- ಶ್ರೀಸತ್ಯಸಂಧರು ಮಹಾಪುರುಷರು. ವಿಜ್ಞಾನಯೋಗಿಗಳು. ಅಷ್ಟೈಶ್ವರ್ಯ ದಿಂದ ವಿಭೂಷಿತರು. ಅವರ ಪ್ರತಿಯೊಂದು ಚರ್ಯೆಯೂ ವಿಜ್ಞಾನದ ಪ್ರತಿಬಿಂಬಗಳು. ಅವರು ಸುಸಂಪನ್ನಗೊಳಿಸುವ ಮೂಲರಾಮನ ಪೂಜೆಯಂತೂ ಅತ್ಯದ್ಭುತ. ಅವರು ಮಾಡುವ ಮೂಲರಾಮನ ಪೂಜೆಯನ್ನು ನೋಡಿದವರು ಮುಕ್ತಿಗೆ ಪಾತ್ರರು.

ಅದೊಂದು ದಿನ. ಶ್ರೀಸತ್ಯಸಂಧತೀರ್ಥರು ಸಾಂಗಲಿಗೆ ಆಗಮಿಸಿದ್ದಾರೆ. ಶ್ರೀಸತ್ಯವ್ರತತೀರ್ಥರ ಸನ್ನಿಧಾನದಲ್ಲಿ ಮೂಲಸೀತಾಸಮೇತ ಮೂಲರಾಮ, ದಿಗ್ವಿಜಯರಾಮ, ವ್ಯಾಸಮುಷ್ಟಿಗಳು ಮುಂತಾದ ಸಂಸ್ಥಾನಪ್ರತಿಮೆಗಳನ್ನು ಭಕ್ತಿಯಿಂದ ಪೂಜಿಸುತ್ತಿದ್ದಾರೆ. ಅತ್ಯಂತ ಭವ್ಯವಾದ ವೃಂದಾವನವದು. ಆ ಪೂಜೆಯನ್ನು ನೋಡುತ್ತಿದ್ದ ವೃಂದಾವನವು ತಲೆದೂಗಿತು. ವೃಂದಾವನದಲ್ಲಿ ಸನ್ನಿಹಿತರಾದ ಶ್ರೀಸತ್ಯವ್ರತತೀರ್ಥರೇ ತಲೆದೂಗಿದರು. ಈಗಲೂ ಒಂದು ಪಾರ್ಶ್ವಕ್ಕೆ ಒರಗಿದ ವೃಂದಾವನದ ದರ್ಶನ ನಮಗೆಲ್ಲರಿಗೂ ಆಗುತ್ತದೆ. ಈ ಇತಿಹಾಸವನ್ನು ಕಣ್ಣ ಮುಂದೆ ನಿಲ್ಲಿಸುತ್ತದೆ. ಇಂಥ ವೈಭವದ ಶ್ರೀಸತ್ಯವ್ರತ-ತೀರ್ಥರನ್ನು ನಮಸ್ಕರಿಸುತ್ತೇನೆ.

Rarest Archiver

**ವಚಸ್ಸತ್ಯಂ ವ್ರತಂ ಸತ್ಯಂ ಸತ್ಯಶ್ಚ ಮಹಿಮಾಽದ್ಭುತಃ ।**
**ಅತಃ ಸಾರ್ಥಾಭಿಧಂ ಸೇವೇ ಶ್ರೀಸತ್ಯವ್ರತಸದ್ಗುರುಮ್ ॥8॥**

**ಅನ್ವಯಾರ್ಥಃ-** **ವಚಃ** ಅವರು ಆಡುವ ಪ್ರತಿಯೊಂದು ವಚನವೂ **ಸತ್ಯಂ** ಸತ್ಯವಾಗಿದೆ **ವ್ರತಂ** ಅವರು ಆಚರಿಸುವ ಎಲ್ಲ ವ್ರತಗಳೂ **ಸತ್ಯಂ** ಸತ್ಯವಾಗಿವೆ **ಚ** ಮತ್ತು **ಮಹಿಮಾ** ಮಹಿಮೆಯು **ಸತ್ಯಃ** ಸತ್ಯವಾಗಿದೆ. **ಅದ್ಭುತಃ** ಆದ್ದರಿಂದ ಅವರು ಅದ್ಭುತರಾಗಿದ್ದಾರೆ. **ಅತಃ** ಆದ್ದರಿಂದ **ಸಾರ್ಥಾಭಿಧಂ** ಸತ್ಯವ್ರತ ಎಂಬ ಅನ್ವರ್ಥಕವಾದ ಹೆಸರಿರುವ **ಶ್ರೀಸತ್ಯವ್ರತಸದ್ಗುರುಂ** ಸತ್ಯವ್ರತತೀರ್ಥರೆಂಬ ಸುಗುಣಭರಿತರಾದ ಗುರುಗಳನ್ನು **ಸೇವೇ** ಸೇವಿಸುತ್ತೇನೆ. ॥8॥

**ತಾತ್ಪರ್ಯ-** ಸತ್ಯವ್ರತ ಎಂಬುದು ಅವರಿಗೆ ಅನ್ವರ್ಥಕ ನಾಮ. ಅವರಾಡುವ ಪ್ರತಿಯೊಂದೂ ಮಾತಿಗೂ ಭಗವಂತ ಓಗೊಡುತ್ತಾನೆ. ಹೀಗೆ ಅವರ ಮಾತು ಸತ್ಯವಾಗುತ್ತದೆ. ಅವರು ಆಚರಿಸುವ ವ್ರತಗಳು ಭಗವಂತನ ಒಲುಮೆಗೆ ಸಾಧನವಾಗುತ್ತವೆ. ಆ ವ್ರತಗಳೂ ಸತ್ಯವಾಗುತ್ತವೆ. ಅವರು ತೋರಿದ ಪ್ರತಿಯೊಂದು ಮಹಿಮೆಯೂ ಸತ್ಯವಾಗಿದೆ. ಆ ಮಹಿಮೆಗಳ

Rarest Archiver

ಶ್ರವಣ-ಸ್ಮರಣಗಳಿಂದ ಇವತ್ತಿಗೂ ಭಕ್ತರು ಅಭೀಷ್ಟಗಳನ್ನು ಪಡೆದುಕೊಳ್ಳುತ್ತಾರೆ. ಹೀಗೆ ಶ್ರೀಸತ್ಯವ್ರತರು ಅದ್ಭುತರಾಗಿದ್ದಾರೆ. ಅದ್ದರಿಂದ ಸಾರ್ಥಕನಾಮಧೇಯ-ರಾಗಿದ್ದಾರೆ. ಅಂಥ ಶ್ರೀಸತ್ಯವ್ರತಸದ್ಗುರುಗಳನ್ನು ನಿರಂತರ ಸೇವಿಸುತ್ತೇನೆ.

**ಯತ್ಕೀರ್ತಿಶ್ರವಣಂ ಮಹಾರ್ತಿಹರಣಂ ಪ್ರಜ್ಞಾನವಿಸ್ಫೂರ್ತಿದಂ**
**ಯತ್ಪಾದೋದಕಸೇವನಂ ನವನವಶ್ವಃಶ್ರೇಯಸೋದ್ಭಾವನಮ್ ।**
**ಯದ್ಧಸ್ತೋದಕಪಾವನೌದನಮಹೋ ಸಚ್ಛಾಂತಿಸಂತಾನದಮ್**
**ಶ್ರೀಸತ್ಯವ್ರತಯೋಗಿನಂ ನತಜನಃಶ್ರೇಯೋವ್ರತಂ ತಂ ಶ್ರಯೇ ॥9॥**

ಅನ್ವಯಾರ್ಥಃ- ಯತ್ಕೀರ್ತಿಶ್ರವಣಂ ಯಾವ ಶ್ರೀಸತ್ಯವ್ರತತೀರ್ಥರ ಕೀರ್ತಿಯನ್ನು ಕೇಳುವುದು ಮಹಾರ್ತಿಹರಣಂ ಅತಿಶಯವಾದ ದುಃಖದ ವಿನಾಶಕ್ಕೆ ಕಾರಣವಾಗಿದೆಯೋ ಪ್ರಜ್ಞಾನವಿಸ್ಫೂರ್ತಿದಂ ವಿಶಿಷ್ಟವಾದ ಜ್ಞಾನ ಮತ್ತು ವಿಶಿಷ್ಟವಾದ ಸ್ಫೂರ್ತಿಗೆ ಸಾಧನವಾಗಿದೆಯೋ ಯತ್ಪಾದೋದಕಸೇವನಂ ಯಾರ ಪಾದಪೂಜೆಯನ್ನು ಮಾಡಿ ಭಕ್ತಿಯಿಂದ ಆ ಪಾದೋದಕವನ್ನು ಶಿರಸಾ ಧರಿಸುವುದು ನವನವಶ್ವಃಶ್ರೇಯಸೋದ್ಭಾವನಂ ಹೊಸ ಹೊಸದಾದ

Rarest Archiver

ಮಂಗಳಗಳನ್ನು ದೊರಕಿಸಿಕೊಡುತ್ತದೋ **ಯದ್ಧಸ್ತೋದಕಪಾವನೌದನಂ** ಯಾರಿಗೆ ಹಸ್ತೋದಕವನ್ನು ನೀಡುವುದರಿಂದ ಪವಿತ್ರವಾದ ಅಡಿಗೆಯು **ಅಹೋ** ಆಶ್ಚರ್ಯಕರವಾಗಿ **ಸಚ್ಛಾಂತಿಸಂತಾನದಂ** ನಿರ್ದುಷ್ಟವಾದ ಶಾಂತಿ ಮತ್ತು ನಿರ್ದುಷ್ಟವಾದ ಸಂತಾನವನ್ನು ನೀಡುತ್ತದೋ **ತಂ** ಅಂಥ **ನತಜನಶ್ರೇಯೋವ್ರತಂ** ನಮಸ್ಕಾರ ಮಾಡಿದ ಭಕ್ತರಿಗೆ ಶ್ರೇಯೋಮಾರ್ಗವನ್ನು ತೋರಿಸುವ ವ್ರತದಲ್ಲಿ ದೀಕ್ಷಿತರಾದ **ಶ್ರೀಸತ್ಯವ್ರತಯೋಗಿನಂ** ಕಾಂತಿಸಂಪನ್ನರಾದ ಸತ್ಯವ್ರತರೆಂಬ ಯತಿಗಳನ್ನು **ಶ್ರಯೇ** ಆಶ್ರಯಿಸುತ್ತೇನೆ. ॥9॥

**ತಾತ್ಪರ್ಯ-** ಶ್ರೀಸತ್ಯವ್ರತರ ಕೀರ್ತಿಯನ್ನು ನಿರಂತರ ಶ್ರವಣ ಮಾಡಬೇಕು. ಆ ಶ್ರವಣ ಭಕ್ತರ ಎಲ್ಲ ದುಃಖಗಳನ್ನು ನಾಶಪಡಿಸುತ್ತದೆ. ಭಕ್ತರಿಗೆ ಸಂತೋಷವನ್ನು ನೀಡುತ್ತದೆ. ಅವರ ಮಹಿಮೆಯ ಶ್ರವಣದಿಂದ ವಿಶಿಷ್ಟವಾದ ಜ್ಞಾನ ಸಂಪನ್ನವಾಗುತ್ತದೆ. ಅಧ್ಯಯನಾದಿಗಳನ್ನು ಮಾಡುವಲ್ಲಿ ವಿಶಿಷ್ಟವಾದ ಸ್ಫೂರ್ತಿಯನ್ನು ನೀಡುತ್ತದೆ.

Rarest Archiver

ಅವರ ಪಾದಪೂಜೆಯನ್ನು ಮಾಡಬೇಕು. ಆ ಪಾದೋದಕವನ್ನು ಶಿರಸಾ ಧರಿಸಬೇಕು. ಅಂಥವರ ಸಕಲ ಪಾಪಗಳು ನಷ್ಟವಾಗುತ್ತವೆ. ಗುರುಪಾದೋದಕ ಧರಿಸಿದವನ ಮನೆಯಲ್ಲಿ ನಿತ್ಯವೂ ಕಲ್ಯಾಣೋತ್ಸವಗಳಾಗುತ್ತವೆ. ಅವರ ಮನಸ್ಸು ಮಂಗಳಮಯವಾಗುತ್ತದೆ. ಹೃದಯ ಮಂಗಳಸದನವಾಗುತ್ತದೆ.

ಗುರುಗಳಾದ ಶ್ರೀಸತ್ಯವ್ರತರಿಗೆ ಪ್ರತಿನಿತ್ಯವೂ ಹಸ್ತೋದಕವನ್ನು ಸಮರ್ಪಿಸಬೇಕು. ಗುರುಗಳಿಗೆ ಹಸ್ತೋದಕವನ್ನು ಸಮರ್ಪಿಸುವುದರಿಂದ ಆ ಯಜಮಾನನ ಅನ್ನವು ಎಲ್ಲವೂ ಪವಿತ್ರವಾಗುತ್ತದೆ. ಅಂಥ ಅನ್ನವನ್ನು ಸ್ವೀಕರಿಸಬೇಕು. ಹೀಗೆ ಮಾಡುವವರ ಸಂತಾನ ಸ್ಥಿರವಾಗುತ್ತದೆ. ಅವರ ಮನೆಯು ಪ್ರಶಾಂತಿಸದನವಾಗುತ್ತದೆ. ಹಸ್ತೋದಕ ಮಾಡಿದ್ದನ್ನೇ ನೇರವಾಗಿ ಸ್ವೀಕರಿಸಬಾರದು. ಅದನ್ನು ಅಗ್ನಿಯಲ್ಲಿ, ಪರಿಶುದ್ಧವಾದ ಸ್ಥಳದಲ್ಲಿ ಅಥವಾ ಜಲಾಶಯ ಮುಂತಾದವುಗಳಲ್ಲಿ ವಿಸರ್ಜಿಸಬೇಕು.

ಪ್ರಣತ ಜನರಿಗೆ ಶ್ರೇಯೋಮಾರ್ಗವನ್ನು ತೋರಿಸುವ ದೊರೆ ಶ್ರೀಸತ್ಯವ್ರತತೀರ್ಥರು. ಅದಕ್ಕಾಗಿಯೇ ಅವರು ಕಟಿಬದ್ಧರಾಗಿದ್ದಾರೆ.

Rarest Archiver

ಭಕ್ತಜನಶ್ರೇಯಃಪ್ರದರ್ಶನ ಎಂಬ ಸತ್ಯವಾದ ವ್ರತದಲ್ಲಿ ತಮ್ಮನ್ನು ತೊಡಗಿಸಿ-ಕೊಂಡಿದ್ದಾರೆ. ಅಂಥ ಯೋಗಿವರೇಣ್ಯರ ಆಶ್ರಯದಲ್ಲಿ ನಾನು ಬಾಳುತ್ತೇನೆ.

**ಅಂಧೋಽಪಿ ಸೂಕ್ಷ್ಮದೃಷ್ಟಿಃ ಸ್ಯಾತ್ ವಂಧ್ಯಾ ಸ್ಯಾದಿಷ್ಟಸಂತತಿಃ ।**
**ಮೂಕೋ ವಾಗ್ಮಿತ್ವಮಾಪ್ನೋತಿ ಶ್ರೀಸತ್ಯವ್ರತಸೇವಯಾ ॥10॥**

**ಅನ್ವಯಾರ್ಥಃ-** ಶ್ರೀಸತ್ಯವ್ರತಸೇವಯಾ ಶ್ರೀಸತ್ಯವ್ರತತೀರ್ಥರ ಸೇವೆಯಿಂದಅಂಧಃಅಪಿಕುರುಡನಾಗಿದ್ದರೂಸೂಕ್ಷ್ಮದೃಷ್ಟಿಃಸೂಕ್ಷ್ಮವಾದುದನ್ನೂ ನೋಡುವ ಕಣ್ಣುಗಳುಳ್ಳವನು ಸ್ಯಾತ್ ಆಗುತ್ತಾನೆ ವಂಧ್ಯಾ ಮಕ್ಕಳಿಲ್ಲದವಳು ಇಷ್ಟಸಂತತಿಃ ಇಷ್ಟವಾದ ಧಾರ್ಮಿಕ ಸಂತಾನ ಉಳ್ಳವಳು ಸ್ಯಾತ್ ಆಗುತ್ತಾಳೆ ಮೂಕಃ ಮಾತು ಬಾರದ ಮೂಕನು ವಾಗ್ಮಿತ್ವಂ ವಾಗ್ಮಿತೆಯನ್ನು ಆಪ್ನೋತಿ ಪಡೆಯುತ್ತಾನೆ. ॥10॥

**ತಾತ್ಪರ್ಯ-** ಸತ್ಯವ್ರತತೀರ್ಥರ ಸೇವೆ ಎಂದಿಗೂ ವ್ಯರ್ಥವಾಗುವುದಿಲ್ಲ. ಸ್ವಯಂ ಕುರುಡ ವಿಶಿಷ್ಟವಾಗಿ ಯಾವ ಸೇವೆಯನ್ನೂ ಮಾಡಲಾಗುವುದಿಲ್ಲ. ತನ್ನ ಸಾಮರ್ಥ್ಯಕ್ಕೆ ತಕ್ಕಂತೆ ಶ್ರೀಸತ್ಯವ್ರತರ ಸೇವೆಯನ್ನು ಮಾಡಿದರೆ ಸಾಕು.

Rarest Archiver

ಸತ್ಯವ್ರತರು ಆ ಕುರುಡರಿಗೆ ಒಲಿಯುತ್ತಾರೆ. ಸತ್ಯವ್ರತರ ಒಲುಮೆಯನ್ನು ಪಡೆದ ಆ ಕುರುಡನ ಮುಂದೆ ಕಣ್ಣಿದ್ದವರು ಕುರುಡರಾಗುತ್ತಾರೆ. ಅಂಥ ದಿವ್ಯದೃಷ್ಟಿಯಿಂದ ಆತ ಸಂಪನ್ನನಾಗುತ್ತಾನೆ.

ಮಕ್ಕಳಿಲ್ಲದೇ ಸಾಧ್ವಿಯರಾದ ಸ್ತ್ರೀಯರು ಪರಿತಪಿಸುತ್ತಾರೆ. ಆ ಪರಿತಾಪದಲ್ಲಿಯೇ ಶ್ರೀಸತ್ಯವ್ರತರ ಸೇವೆಯನ್ನು ಮಾಡುತ್ತಾರೆ. ಪರಿತಪ್ತರಾದವರು ಮಾಡುವ ಸೇವೆ ಪೂರ್ಣವಾಗಲಾರದು. ಆದರೂ ಅವರ ಸೇವೆಗೆ ಶ್ರೀಸತ್ಯವ್ರತತೀರ್ಥರು ಸಂತುಷ್ಟರಾಗುತ್ತಾರೆ. ಗುರುಗಳ ಸಂತುಷ್ಟಿಯಿಂದ ಅಭೀಷ್ಟವಾದ ಸಂತತಿಯನ್ನು ಪಡೆಯುತ್ತಾಳೆ. ಗುರುಗಳ ಕರುಣೆಯ ತೊರೆಯಲ್ಲಿ ಓಲಾಡುತ್ತಾಳೆ. ಇಷ್ಟಸಂತತಿಯಿಂದ ಸಂತುಷ್ಟಳಾಗುತ್ತಾಳೆ.

ಮಾತುಬಾರದ ಮೂಕನ ಸೇವೆಯನ್ನೂ ಗುರುಗಳು ಗಮನಿಸುತ್ತಾರೆ. ಆತ ವಾಗ್ಮಿಯಾಗುವಂತೆ ಅನುಗ್ರಹಿಸುತ್ತಾರೆ. ಅಂಥವರ ಸೇವೆಯೇ ನನ್ನ ಸೌಭಾಗ್ಯ.

**ರೋಗೀ ಬಲವದಾರೋಗ್ಯಭಾಗ್ಯಭೋಗೀ ಭವೇದ್ಧ್ರುವಮ್ ।**
**ಬಧಿರೋ ಮಧುರಾಲಾಪಶ್ರವಣಾತ್ ಸುಖಮಾಪ್ನುಯಾತ್ ॥11॥**

Rarest Archiver

**ಅನ್ವಯಾರ್ಥಃ-** **ರೋಗೀ** ರೋಗಿಯಾದವನು **ಬಲವದಾರೋಗ್ಯಭಾಗ್ಯಭೋಗೀ** ಬಲವಂತನೂ ಆರೋಗ್ಯ ಉಳ್ಳವನೂ, ಭಾಗ್ಯಗಳನ್ನು ಅನುಭವಿಸುವ ಸಮರ್ಥನೂ **ಭವೇತ್** ಆಗುತ್ತಾನೆ **ಬಧಿರಃ** ಕಿವುಡನು **ಮಧುರಾಲಾಪಶ್ರವಣಾತ್** ಮಧುರವಾದ ಭಗವದ್ವಿಷಯಕವಾದ ಆಲಾಪಗಳ ಶ್ರವಣದಿಂದ **ಸುಖಂ** ಸುಖವನ್ನು **ಆಪ್ನುಯಾತ್** ಪಡೆಯುತ್ತಾನೆ. **ಧ್ರುವಂ** ಇದು ನಿಶ್ಚಿತ. ||11||

**ತಾತ್ಪರ್ಯ-** ರೋಗದಿಂದ ಬಳಲುವ ಜನರು ಹಲವಾರು. ವೈದ್ಯರಿಂದ ನಿರಾಶೆಗೆ ಒಳಗಾಗುತ್ತಾರೆ. ಅನ್ಯರು ಶರಣರಿಲ್ಲದೇ ಗುರ್ವಂತರ್ಯಾಮಿಯಾದ ಹರಿಯೇ ಶರಣೆಂದು ನಂಬಿ ಬರುತ್ತಾರೆ. ತಮ್ಮ ಶಕ್ತಿಗೆ ಅನುಗುಣವಾಗಿ ಗುರುಗಳ ಸೇವೆಯನ್ನು ಮಾಡುತ್ತಾರೆ. ಅವರ ಸೇವೆಗೆ ಗುರುಗಳು ಪ್ರಸನ್ನರಾಗುತ್ತಾರೆ. ಎಲ್ಲ ರೋಗಗಳನ್ನು ಪರಿಹರಿಸುತ್ತಾರೆ. ಆ ರೋಗಿಯು ಆರೋಗ್ಯವಂತರಿಗಿಂತಲೂ ಬಲವಂತನಾಗುತ್ತಾನೆ. ಆರೋಗ್ಯವನ್ನು ಪಡೆಯುತ್ತಾನೆ. ವಿಧವಿಧವಾದ ಭಾಗ್ಯಗಳನ್ನು ಅನುಭವಿಸುತ್ತಾನೆ. ತಿರಸ್ಕರಿಸಿದ ವೈದ್ಯರಿಗೂ ಸವಾಲಾಗಿ ಬದುಕುತ್ತಾನೆ.

Rarest Archiver

ಹುಟ್ಟುಕಿವುಡ ಶ್ರೀಗಳವರ ಸೇವೆ ಮಾಡುತ್ತಾನೆ. ಆ ಸೇವೆಗೆ ಶ್ರೀಗಳು ಸುಮುಖರಾಗುತ್ತಾರೆ. ಶಾಸ್ತ್ರಾರ್ಥವಿಚಾರಗಳು ಆತನ ಕಿವಿಗೆ ಬೀಳುತ್ತವೆ. ಅದರಿಂದ ಸಂತೋಷವನ್ನು ಅನುಭವಿಸುತ್ತಾನೆ. ಕಿವುಡನು ಶಾಸ್ತ್ರಗಳನ್ನು ಶ್ರವಣ ಮಾಡುವಲ್ಲಿ ತೊಡಗುತ್ತಾನೆ. ಇದು ನಿಶ್ಚಿತ. ಇಂಥ ಗುರುಗಳ ಸೇವೆಯನ್ನು ನಾನು ಮಾಡುತ್ತೇನೆ.

**ಅಜ್ಞಂ ಕರೋತಿ ಯಃ ಪ್ರಾಜ್ಞಂ ರಂಕಂ ರಾಜಾಧಿಕಂ ಶ್ರಿಯಾ ।**
**ವಿಪನ್ನಂ ಸುಖಸಂಪನ್ನಂ ತಂ ಶ್ರೀಸತ್ಯವ್ರತಂ ಭಜೇ ॥12॥**

**ಅನ್ವಯಾರ್ಥಃ-** ಯಃ ಯಾವ ಶ್ರೀಸತ್ಯವ್ರತತೀರ್ಥರು ಅಜ್ಞಂ ಅಜ್ಞಾನಿಯನ್ನು ಪ್ರಾಜ್ಞಂ ವಿಜ್ಞಾನಿಯನ್ನಾಗಿ ರಂಕಂ ದರಿದ್ರನನ್ನು ರಾಜಾಧಿಕಂ ರಾಜನಿಗಿಂತಲೂ ಅಧಿಕ ಸಂಪತ್ತಿದ್ದವನನ್ನಾಗಿ ಶ್ರಿಯಾ ವಿಪನ್ನಂ ಸಂಪತ್ತಿಲ್ಲದೇ ಕ್ಲೇಶದಲ್ಲಿ ಮುಳುಗಿದವನನ್ನು ಸುಖಸಂಪನ್ನಂ ಸುಖದಿಂದ ಯುಕ್ತನನ್ನಾಗಿ ಕರೋತಿ ಮಾಡುವರೋ ತಂ ಅಂಥ ಶ್ರೀಸತ್ಯವ್ರತಂ ಶ್ರೀಸತ್ಯವ್ರತೀರ್ಥರನ್ನು ಭಜೇ ಸೇವಿಸುತ್ತೇನೆ. ॥12॥

Rarest Archiver

ತಾತ್ಪರ್ಯ- ಶ್ರೀಗಳವರ ಸಾಮರ್ಥ್ಯ ಯಾರ ಅಂದಾಜಿಗೂ ನಿಲುಕುವುದಿಲ್ಲ. ಆ ಸಾಮರ್ಥ್ಯ ಅನುಪಮ. ಅತ್ಯಂತ ಅಜ್ಞಾನಿಯನ್ನು ಪ್ರಾಜ್ಞನನ್ನಾಗಿ ಮಾಡುತ್ತಾರೆ. ದರಿದ್ರನಿಗೆ ರಾಜಾಧಿಕವಾದ ಸಂಪತ್ತನ್ನು ನೀಡುತ್ತಾರೆ. ಸುಖವೇ ಇಲ್ಲದೇ ಶೋಕಸಾಗರದಲ್ಲಿ ಮುಳುಗಿದವನಿಗೆ ಸಾಗರದಷ್ಟು ಸುಖವನ್ನು ನೀಡುತ್ತಾರೆ. ಅಂಥ ಶ್ರೀಸತ್ಯವ್ರತತೀರ್ಥರನ್ನು ನಾನು ಸೇವಿಸುತ್ತೇನೆ.

**ಸರ್ವಸಂಪತ್ಪ್ರದಾತಾರಂ ಸರ್ವಾಪತ್ಪರಿಹಾರಕಮ್ ।**
**ಕರುಣಾವರುಣಾಗಾರಂ ಸೇವೇ ಸತ್ಯವ್ರತಂ ಗುರುಮ್ ॥13॥**

**ಅನ್ವಯಾರ್ಥಃ- ಸರ್ವಸಂಪತ್ಪ್ರದಾತಾರಂ** ಧನ-ಧಾನ್ಯ-ಪಶು ಮುಂತಾದ ಎಲ್ಲವಿಧವಾದ ಸಂಪತ್ತನ್ನು ನೀಡುವ **ಸರ್ವಾಪತ್ಪರಿಹಾರಕಂ** ಕಾಯಿಕ-ವಾಚಿಕ-ಮಾನಸಿಕ, ಆಧ್ಯಾತ್ಮಿಕ-ಆಧಿಭೌತಿಕ-ಆಧಿದೈವಿಕವಾದ ಎಲ್ಲ ಆಪತ್ತುಗಳನ್ನು ಪರಿಹರಿಸುವ **ಕರುಣಾವರುಣಾಗಾರಂ** ಕರುಣಾಸಮುದ್ರರಾದ **ಗುರುಂ** ಗುರುಗಳಾದ **ಸತ್ಯವ್ರತಂ** ಶ್ರೀಸತ್ಯವ್ರತತೀರ್ಥರನ್ನು **ಸೇವೇ** ಸೇವಿಸುತ್ತೇನೆ. ॥

Rarest Archiver

**ತಾತ್ಪರ್ಯ**- ಗುರುಗಳು ವಿವಿಧವಾದ ಸಂಪತ್ತನ್ನು ನೀಡುತ್ತಾರೆ. ಧನ-ಧಾನ್ಯ-ಕನಕ-ವಸನ-ವಿಭೂಷಣ-ಪಶು ಮುಂತಾದ ಯಾವುದನ್ನು ನೀಡಲೂ ಸಿದ್ಧಹಸ್ತರು ಶ್ರೀಸತ್ಯವ್ರತರು. ಇಂಥದ್ದನ್ನು ನೀಡೆ ಎಂದು ಹೇಳುವುದೇ ಇಲ್ಲ. ಮನುಷ್ಯನ ಕ್ಲೇಶಗಳು ನಾನಾವಿಧ. ಒಂದು ಕ್ಲೇಶವನ್ನು ಕಳೆಯುವುದೂ ಸುಲಭವಲ್ಲ. ಅತ್ಯಂತ ಕಠಿನ. ಕಾಯಿಕ-ಮಾನಸಿಕ-ವಾಚಿಕ, ಆಧ್ಯಾತ್ಮಿಕ-ಆಧಿದೈವಿಕ-ಆಧಿಭೌತಿಕ ಹೀಗೆ ಎಲ್ಲವಿಧವಾದ ಕಷ್ಟಗಳನ್ನು ತೊಲಗಿಸಲು ಸಮರ್ಥರು ಶ್ರೀಸತ್ಯವ್ರತರು. ಶ್ರೀಸತ್ಯವ್ರತರು ಕರುಣಾಸಮುದ್ರರು. ಆ ಸಮುದ್ರದ ಮುಂದೆ ಹೋಗಿ ನಿಲ್ಲುವುದಿಷ್ಟೇ ನಮ್ಮ ಕೆಲಸ. ಮುಂದೆ ಎಲ್ಲವೂ ಆ ಸಮುದ್ರದ ಇಚ್ಛೆಗೆ ಬಂದಂತೆ ಆಗುತ್ತದೆ. ಅಲ್ಲಿ ಸ್ನಾನ ಮಾಡಲು ನಾವು ಯಾವುದೇ ವಿಧವಾದ ಪ್ರಯತ್ನ ಮಾಡುವ ಅಗತ್ಯವಿಲ್ಲ. ಅಪರಿಮಿತವಾದ ಆ ಸಾಗರವೇ ತನ್ನ ತೆರೆಗಳಿಂದ ನಮ್ಮನ್ನು ಸಂತೈಸುತ್ತದೆ. ನಮ್ಮನ್ನು ಪವಿತ್ರಗೊಳಿಸುತ್ತದೆ. ಅಂಥ ಗುರುಗಳಾದ ಶ್ರೀಸತ್ಯವ್ರತತೀರ್ಥರನ್ನು ನಾನು ಸೇವಿಸುತ್ತೇನೆ.

Rarest Archiver

**ಸ್ಮರಣಂ ದುರಿತೌಘಾದ್ರಿದಾರಣೇ ದಾರುಣಾಶನಿಃ ।**
**ಚಿಂತನಂ ಚ ಗುರೋರ್ಭಕ್ತಚಿಂತಾಶತನಿಕೃಂತನಮ್ ॥14॥**

**ಅನ್ವಯಾರ್ಥಃ- ಗುರೋಃ** ಗುರುಗಳಾದ ಶ್ರೀಸತ್ಯವ್ರತತೀರ್ಥರ **ಸ್ಮರಣಂ** ಸ್ಮರಣೆಯು **ದುರಿತೌಘಾದ್ರಿದಾರಣೇ** ಪಾಪಗಳೆಂಬ ಕಡಿದಾದ ಪರ್ವತಗಳನ್ನು ಸೀಳಿಹಾಕುವ ವಿಷಯದಲ್ಲಿ **ದಾರುಣಾಶನಿಃ** ಭಯಂಕರವಾದ ವಜ್ರಾಯುಧ-ವಾಗುವುದೋ **ಚ** ಮತ್ತು **ಚಿಂತನಂ** ಗುರುಗಳ ಚಿಂತನೆಯು **ಭಕ್ತಚಿಂತಾಶತನಿಕೃಂತನಂ** ಭಕ್ತರ ನೂರಾರು ಚಿಂತೆಗಳನ್ನು ಕಡಿದುಹಾಕುತ್ತದೋ **ತಂ** ಅಂಥ **ಸತ್ಯವ್ರತಂ** ಶ್ರೀಸತ್ಯವ್ರತತೀರ್ಥರನ್ನು **ಸೇವೇ** ಸೇವಿಸುತ್ತೇನೆ.

**ತಾತ್ಪರ್ಯ-** ನಾವು ಮಾಡಿದ ಪಾಪಗಳು ಅತ್ಯಂತ ಕಠೋರವಾಗಿವೆ. ಅತಿ ಭಾರವಾಗಿವೆ. ಅವುಗಳನ್ನು ಅಲುಗಾಡಿಸಲೂ ಸಾಧ್ಯವಿಲ್ಲ. ಹಾಗೆ ಪಾಪಪರ್ವತಗಳನ್ನು ಹೊತ್ತು ನಿಂತಿದ್ದೇವೆ. ಅಂಥ ಅನಂತಪಾಪಪರ್ವತಗಳನ್ನು ಕಡಿದು ಹಾಕುವ ವಜ್ರಾಯುಧವೇ ಶ್ರೀಗಳವರ ಸ್ಮರಣೆ. ಅವರ ಸ್ಮರಣೆಯಿಂದ ದೂರವಾಗದ ದುರಿತವೇ ಇಲ್ಲ. ಎಲ್ಲ ದುರಿತಗಳು ಶ್ರೀಗಳವರ ಸ್ಮರಣೆಗೆ

Rarest Archiver

ಭೀತವಾಗುತ್ತವೆ. ಗುರುಚಿಂತನೆ ಇದು ಭಯಂಕರವಾದ ವಜ್ರಾಯುಧ. ಭಕ್ತರ ಲೆಕ್ಕವಿಲ್ಲದ ಚಿಂತೆಗಳನ್ನು ಪರಿಹರಿಸುವ ಆಯುಧವೇ ಗುರುಚಿಂತನೆ. ಇಂಥ ಮಹಿಮೆಯಿಂದ ಸಂಪನ್ನರಾದ ಶ್ರೀಸತ್ಯವ್ರತತೀರ್ಥರ ಸೇವೆಯನ್ನು ನಿಷ್ಠೆಯಿಂದ ಮಾಡುತ್ತೇನೆ.

**ಪ್ರದಕ್ಷಿಣಾಸ್ತಥಾऽಕ್ಷೀಣಫಲದಾನವಿಚಕ್ಷಣಾಃ ।**
**ನಮಸ್ಕಾರಾಸ್ಸುಸತ್ಕಾರಪುರಸ್ಕಾರಪ್ರದಾ ಧ್ರುವಮ್ ॥15॥**

**ಅನ್ವಯಾರ್ಥಃ-** **ಪ್ರದಕ್ಷಿಣಾಃ** ಯಾವ ಸತ್ಯವ್ರತತೀರ್ಥರಿಗೆ ಮಾಡಿದ ಪ್ರದಕ್ಷಿಣೆಗಳು **ಅಕ್ಷೀಣಫಲದಾನವಿಚಕ್ಷಣಾಃ** ನಾಶವಾಗದಿರುವ ಶಾಶ್ವತವಾದ ಫಲಗಳನ್ನು ನೀಡಲು ಸಮರ್ಥವಾಗಿವೆಯೋ **ತಥಾ** ಮತ್ತು **ನಮಸ್ಕಾರಾಃ** ನಮಸ್ಕಾರಗಳು **ಸುಸತ್ಕಾರಪುರಸ್ಕಾರಪ್ರದಾಃ** ಪ್ರಾಮಾಣಿಕವಾದ ಸತ್ಕಾರ ಮತ್ತು ಪುರಸ್ಕಾರಗಳನ್ನು ಜಗತ್ತಿನಲ್ಲಿ ನೀಡಲು ಸಮರ್ಥವಾಗಿವೆಯೋ **ತಂ** ಅಂಥ **ಗುರುಂ** ಗುರುಗಳಾದ **ಸತ್ಯವ್ರತಂ** ಶ್ರೀಸತ್ಯವ್ರತ- ತೀರ್ಥರನ್ನು **ಧ್ರುವಂ** ನಿಶ್ಚಿತವಾಗಿಯೂ **ಸೇವೇ** ಸೇವಿಸುತ್ತೇನೆ. ॥15॥

Rarest Archiver

ತಾತ್ಪರ್ಯ- ಗುರುಗಳ ವೃಂದಾವನಕ್ಕೆ ಪ್ರದಕ್ಷಿಣೆಗಳನ್ನು ಹಾಕಬೇಕು. ಆ ಪ್ರದಕ್ಷಿಣೆಗಳಿಂದ ಕ್ಷೀಣವಾಗದ ಪಾಪಗಳೇ ಇಲ್ಲ. ಅಕ್ಷೀಣವಾದ ಫಲಗಳನ್ನು ನೀಡುವಲ್ಲಿ ಆ ಪ್ರದಕ್ಷಿಣೆಗಳು ಸಮರ್ಥವಾಗಿವೆ. ಸತ್ಯವ್ರತತೀರ್ಥರಿಗೆ ಪ್ರದಕ್ಷಿಣೆಗಳನ್ನು ಹಾಕಿದವರು ಲೋಕದಲ್ಲಿ ಪೂಜ್ಯರಾಗುತ್ತಾರೆ. ಜಗತ್ತಿನಲ್ಲಿ ಗಣ್ಯರಾಗುತ್ತಾರೆ. ಅವರ ಸೇವೆಯನ್ನು ಮಾಡುತ್ತೇನೆಂಬುದು ಬರಿಮಾತಲ್ಲ. ಅದು ನಿಶ್ಚಿತ.

**ಸ್ತೋತ್ರಮೇತತ್ಪಠನ್ನಿತ್ಯಂ ಭಕ್ತ್ಯಾ ಸೇವಾಂ ಕರೋತಿ ಯಃ ।**
**ತಸ್ಯ ಪ್ರಸನ್ನೋಽಭೀಷ್ಟಾನಿ ದದಾತಿ ಮುನಿರಾಡ್ಗುರುಃ ॥16॥**

**ಅನ್ವಯಾರ್ಥಃ-** ಏತತ್ **ಸ್ತೋತ್ರಂ** ಈ ಸ್ತೋತ್ರವನ್ನು **ಪಠನ್** ಪಠಿಸುತ್ತಾ **ನಿತ್ಯಂ** ಪ್ರತಿನಿತ್ಯವೂ **ಭಕ್ತ್ಯಾ** ಭಕ್ತಿಯಿಂದ **ಯಃ** ಯಾವನು **ಸೇವಾಂ** ಸೇವೆಯನ್ನು **ಕರೋತಿ** ಮಾಡುತ್ತಾನೋ **ತಸ್ಯ** ಆತನಿಗೆ **ಪ್ರಸನ್ನಃ** ಪ್ರಸನ್ನರಾದ **ಮುನಿರಾಡ್ಗುರುಃ** ಶ್ರೇಷ್ಠರಾದ ಮುನಿಗಳಿಗೆ ಗುರುಗಳಾದ ಸತ್ಯವ್ರತತೀರ್ಥರು **ಅಭೀಷ್ಟಾನಿ** ಅಭೀಷ್ಟಗಳನ್ನು **ದದಾತಿ** ನೀಡುತ್ತಾರೆ.

Rarest Archiver

ತಾತ್ಪರ್ಯ- ಇದು ಸತ್ಯವ್ರತತೀರ್ಥರ ಸ್ತೋತ್ರ. ಈ ಸ್ತೋತ್ರವನ್ನು ಪಠಿಸುತ್ತಾ ಗುರುಗಳಿಗೆ ಪ್ರದಕ್ಷಿಣೆ-ನಮಸ್ಕಾರ ಇತ್ಯಾದಿ ಸೇವೆಯನ್ನು ಮಾಡಬೇಕು. ಆ ಸಾಧಕನ ಸಕಲ ಅಭೀಷ್ಟಗಳೂ ಸಂಪನ್ನವಾಗುತ್ತವೆ.

**ಸತ್ಯವ್ರತಾನುಕಂಪಾಪ್ತಸದ್ಯೋವಿದ್ಯಾವಿಲಾಸಿನಾ ।**
**ಸತ್ಪರಾಕ್ರಮತೀರ್ಥೇನ ಕೃತಂ ಸ್ತೋತ್ರಮಿದಂ ಶುಭಮ್ ॥17॥**

**ಅನ್ವಯಾರ್ಥಃ- ಸತ್ಯವ್ರತಾನುಕಂಪಾಪ್ತಸದ್ಯೋವಿದ್ಯಾವಿಲಾಸಿನಾ** ಸತ್ಯವ್ರತ ತೀರ್ಥರ ಅನುಗ್ರಹದಿಂದ ಕೂಡಲೇ ವಿದ್ಯೆಯಿಂದ ಸಂಪನ್ನರಾದ **ಸತ್ಪರಾಕ್ರಮ ತೀರ್ಥೇನ** ಸತ್ಯಪರಾಕ್ರಮತೀರ್ಥರಿಂದ **ಕೃತಂ** ರಚಿತವಾದ **ಇದಂ ಸ್ತೋತ್ರಂ** ಈ ಸ್ತೋತ್ರವು **ಶುಭಂ** ಪಠಿಸುವವರಿಗೆ ಶುಭಪ್ರದವಾಗಿದೆ. ॥17॥

ತಾತ್ಪರ್ಯ- ಸತ್ಯವ್ರತರ ಮಹಿಮೆಯನ್ನು ಪ್ರತ್ಯಕ್ಷವಾಗಿ ಅನುಭವಿಸಿದ ಸುಭಗರು ನಾವು. ಅದೇ ಪರಂಪರೆಯಲ್ಲಿ ಬಂದುದು ನಮ್ಮ ಸೌಭಾಗ್ಯ. ಸತ್ಯಪರಾಕ್ರಮ ಎಂದು ನಾವು ಪ್ರಖ್ಯಾತರಾಗಿದ್ದೇವೆ. ಗುರುಗಳ ಸ್ತುತಿಯನ್ನು

Rarest Archiver

ಮಾಡಿ ನಿಜವಾಗಿಯೂ ಸತ್ಯಪರಾಕ್ರಮರೆನಿಸಿದ್ದೇವೆ. ಶ್ರೀಸತ್ಯವ್ರತರ ಕರುಣೆಯಿಂದಲೇ ನಾವು ವಿದ್ವತ್ತನ್ನು ಪಡೆದಿದ್ದೇವೆ. ದುಷ್ಟಶಾಸ್ತ್ರವನ್ನು ನಿರಾಕರಿಸಿ, ಸಚ್ಛಾಸ್ತ್ರವನ್ನು ಪ್ರತಿಪಾದಿಸುವ ಕಾರ್ಯವನ್ನು ನಿರಂತರವಾಗಿ ಮಾಡುತ್ತಿದ್ದೇವೆ. ಈ ವಿದ್ಯಾವಿಲಾಸ ಗುರುಕಾರುಣ್ಯಸಂಪ್ರಾಪ್ತ. ಇಂಥ ಶ್ರೀಸತ್ಯಪರಾಕ್ರಮರು ಈ ಸ್ತೋತ್ರವನ್ನು ರಚಿಸಿದ್ದಾರೆ. ಈ ಸ್ತೋತ್ರ ಅತ್ಯಂತ ಶುಭವಾಗಿದೆ. ಪಠಿಸುವವರಿಗೆ ಶುಭಪ್ರದವಾಗಿದೆ.

॥ ಇತಿ ಶ್ರೀ ಸತ್ಯಪರಾಕ್ರಮತೀರ್ಥವಿರಚಿತಂ ಶ್ರೀಸತ್ಯವ್ರತಸ್ತೋತ್ರಮ್ ॥



Rarest Archiver